KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**



| ಭಾಗ – ***IV-A*** | ಬೆಂಗಳೂರು, ಬುಧವಾರ, ಮಾರ್ಚ್ ೯, ೨೦೧೧ (ಫಾಲ್ಗುಣ ೧೮, ಶಕ ವರ್ಷ ೧೯೩೨) | ನಂ. ೨೯೬ |
|---|---|---|



## *KARNATAKA LEGISLATIVE ASSEMBLY SECRETARIAT*

## *NOTIFICATION*

***No. KLA/LGA/18/Bill/2011, Bangalore, Dated: 9th March, 2011***

The following Bill was introduced in Legislative Assembly on 9.3.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಒಂಭತ್ತನೇ ಅಧಿವೇಶನ**

**ಕರ್ನಾಟಕ ರಾಜ್ಯ ನವೀನಾತ್ಮಕ ವಿಶ್ವವಿದ್ಯಾಲಯಗಳ ವಿಧೇಯಕ, 2011**

**(2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 18)**

ಕರ್ನಾಟಕ ರಾಜ್ಯದಲ್ಲಿಯ ಕೆಲವು ವಿಶ್ವವಿದ್ಯಾಲಯಗಳನ್ನು ಪುನರ್‌ವಿನ್ಯಾಸಗೊಳಿಸಲು ಮತ್ತು ನವೀನಾತ್ಮಕ ವಿಶ್ವವಿದ್ಯಾಲಯಗಳಾಗಿ ಸ್ಥಾಪಿಸಲು ಒಂದು ವಿಧೇಯಕ.

ಕರ್ನಾಟಕ ರಾಜ್ಯದಲ್ಲಿಯ ಕೆಲವು ವಿಶ್ವವಿದ್ಯಾಲಯಗಳ ಶೈಕ್ಷಣಿಕ ಮತ್ತು ಆಡಳಿತಾತ್ಮಕ ಪ್ರಕಾರ್ಯಗಳನ್ನು ವಿಕೇಂದ್ರೀಕರಿಸುವ ಮತ್ತು ಪ್ರತ್ಯೇಕಿಸುವ, ಶೈಕ್ಷಣಿಕ ವಲಯಗಳಲ್ಲಿ ಈ ವಿಶ್ವವಿದ್ಯಾಲಯಗಳಿಗೆ ಹೆಚ್ಚಿನ ಸ್ವಾಯತ್ತತೆಯನ್ನು ನೀಡಿ, ನವೀನಾತ್ಮಕ ವಿಶ್ವವಿದ್ಯಾಲಯಗಳಾಗಿ ಪುನರ್ ವಿನ್ಯಾಸಗೊಳಿಸುವುದಕ್ಕಾಗಿ ಮತ್ತು ಸ್ಥಾಪಿಸುವುದಕ್ಕಾಗಿ ಉಪಬಂಧಗಳನ್ನು ಕಲ್ಪಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ. ಅಂತರ್ ವಿದ್ಯಾ ವಿಷಯ ವಿಭಾಗಗಳಲ್ಲಿ ಮತ್ತು ಬಹು ವಿದ್ಯಾ ವಿಭಾಗಗಳ ನಿಕಟ ಸಂಬಂಧ ಸೌಲಭ್ಯಗಳನ್ನು ಒದಗಿಸುವ ಮೂಲಕ, ಶೈಕ್ಷಣಿಕ ಮತ್ತು ಸಂಶೋಧನಾ ಸ್ವರೂಪದಲ್ಲಿ ಇನ್ನೂ ಹೆಚ್ಚಿನ ನಮ್ಯತೆಯನ್ನು ತರುವುದಕ್ಕಾಗಿ ಮತ್ತು ಅದಕ್ಕೆ ಸಂಬಂಧಿಸಿದ ಹಾಗೂ ಆನುಷಂಗಿಕವಾದ ವಿಷಯಗಳಿಗಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ.–

**ಅಧ್ಯಾಯ *I***

**ಪ್ರಾರಂಭಿಕ**

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ರಾಜ್ಯ ನವೀನಾತ್ಮಕ ವಿಶ್ವವಿದ್ಯಾಲಯಗಳ ಅಧಿನಿಯಮ, 2011** ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವೂ ಅನ್ಯಥಾ ಅಗತ್ಯಪಡಿಸಿದ ಹೊರತು,–

(1) "ವಿದ್ಯಾವಿಷಯಕ ಪರಿಷತ್ತು" ಎಂದರೆ, ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಯ ಅಡಿಯಲ್ಲಿಯ ವಿದ್ಯಾ ವಿಷಯಕ ಪರಿಷತ್ತು;

(2) "ಸಂಯೋಜನಾ ಪದ್ಧತಿ" ಎಂದರೆ, ವಿಶ್ವವಿದ್ಯಾಲಯದ ಸಂಯೋಜನಾ ಪದ್ಧತಿ;

(3) "ಲೆಕ್ಕ ಪರಿಶೋಧನೆ ಮತ್ತು ಹಣಕಾಸು ಪರಿಷತ್ತು" ಎಂದರೆ, ವಿಶ್ವವಿದ್ಯಾಲಯದ ಲೆಕ್ಕ ಪರಿಶೋಧನೆ ಮತ್ತು ಹಣಕಾಸು ಪರಿಷತ್ತು;

(4) "ಸಂಯೋಜನೆ ಮತ್ತು ಪರೀಕ್ಷಾ ಮಂಡಳಿ" ಎಂದರೆ, ವಿಶ್ವವಿದ್ಯಾಲಯದ ಸಂಯೋಜನಾ ಪದ್ಧತಿಯ ಅಡಿಯಲ್ಲಿಯ ಸಂಯೋಜನೆ ಮತ್ತು ಪರೀಕ್ಷಾ ಮಂಡಳಿ;

(5) "ಪ್ರಬಂಧಕ ಮಂಡಳಿ" ಎಂದರೆ, ವಿಶ್ವವಿದ್ಯಾಲಯದ ಪ್ರಬಂಧಕ ಮಂಡಳಿ;

(6) "ಕೇಂದ್ರ" ಎಂದರೆ, ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಯ ಅಡಿಯಲ್ಲಿಯ ಒಂದು ಕೇಂದ್ರ.;

(7) "ಡೀನ್" ಎಂದರೆ, ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಯ ಅಡಿಯಲ್ಲಿಯ ಡೀನ್;

(8) "ನೌಕರ" ಎಂದರೆ, ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕ ಅಥವಾ ವಿಶ್ವವಿದ್ಯಾಲಯದ ಇತರ ಸಿಬ್ಬಂದಿಯಾಗಿ ನೇಮಕಗೊಂಡ ಯಾವೊಬ್ಬ ವ್ಯಕ್ತಿ;

(9) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(10) "ವ್ಯವಸ್ಥಾಪನಾ ಪರಿಷತ್ತು" ಎಂದರೆ, ವಿಶ್ವವಿದ್ಯಾಲಯದ ಸಂಯೋಜನಾ ಪದ್ಧತಿಯ ಅಡಿಯಲ್ಲಿಯ ವ್ಯವಸ್ಥಾಪನಾ ಪರಿಷತ್ತು;

(11) "ಇತರ ಹಿಂದುಳಿದ ವರ್ಗಗಳು" ಎಂದರೆ, ಸಂವಿಧಾನದ 15(4)ನೇ ಅನುಚ್ಛೇದ ಮತ್ತು 16(4)ನೇ ಅನುಚ್ಛೇದದ ಅಡಿಯಲ್ಲಿ ಸರ್ಕಾರವು ಕಾಲಕಾಲಕ್ಕೆ ಹಾಗೆಂದು ಅಧಿಸೂಚಿಸಿದ ಸಮುದಾಯಗಳು, ಜಾತಿಗಳು ಮತ್ತು ಪಂಗಡಗಳು;

(12) "ಓಂಬುಡ್ಸ್‌ಮನ್" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿತವಾದ ವಿಶ್ವವಿದ್ಯಾಲಯದ ಓಂಬುಡ್ಸ್‌ಮನ್;

(13) "ಅಧ್ಯಕ್ಷ" ಎಂದರೆ, ವಿಶ್ವವಿದ್ಯಾಲಯದ ಅಧ್ಯಕ್ಷ;

(14) "ಸಹಕುಲಪತಿ" ಎಂದರೆ, ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಗೆ ಸಂಬಂಧಿಸಿದಂತೆ, ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಯ ಸಹಕುಲಪತಿ ಹಾಗೂ ವಿಶ್ವವಿದ್ಯಾಲಯದ ಸಂಯೋಜನಾ ಪದ್ಧತಿಗೆ ಸಂಬಂಧಿಸಿದಂತೆ, ವಿಶ್ವವಿದ್ಯಾಲಯದ ಸಂಯೋಜನಾ ಪದ್ಧತಿಯ ಸಹಕುಲಪತಿ;

(15) "ಪ್ರಾಂಶುಪಾಲ" ಎಂದರೆ, ಒಂದು ಕಾಲೇಜಿನ ಮುಖ್ಯಸ್ಥ;

(16) "ಮಾನ್ಯತೆ ಪಡೆದ ಸಂಸ್ಥೆ" ಎಂದರೆ, ವಿಶ್ವವಿದ್ಯಾಲಯವು ನಿರ್ವಹಿಸುವ ಅಥವಾ ಅದರಿಂದ ಮಾನ್ಯತೆ ಪಡೆದ ಅಥವಾ ಅದರೊಡನೆ ಜೊತೆಗೂಡಿದ ಉನ್ನತ ಕಲಿಕೆ ಸಂಸ್ಥೆ ಮತ್ತು / ಅಥವಾ ಸಂಶೋಧನಾ ಕೇಂದ್ರ;

(17) "ಕುಲಸಚಿವ" ಎಂದರೆ, ವಿಶ್ವವಿದ್ಯಾಲಯದ ಕುಲಸಚಿವ (ರಿಜಿಸ್ಟ್ರಾರ್);

(18) "ಧಾರ್ಮಿಕ ಅಲ್ಪಸಂಖ್ಯಾತರು" ಎಂದರೆ, ಭಾರತ ಸಂವಿಧಾನದ 30ನೇ ಅನುಚ್ಛೇದದ ಅರ್ಥ ವ್ಯಾಪ್ತಿಯೊಳಗೆ ಧಾರ್ಮಿಕ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ವ್ಯಕ್ತಿಗಳು;

(19) "ನಿಯಮಗಳು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ವಿಶ್ವವಿದ್ಯಾಲಯದ ನಿಯಮಗಳು;

(20) "ಅನುಸೂಚಿ" ಎಂದರೆ, ಈ ಅಧಿನಿಯಮಕ್ಕೆ ಲಗತ್ತಾದ ಅನುಸೂಚಿ;

(21) "ಅನುಸೂಚಿತ ಜಾತಿ" ಎಂಬುದು, ಭಾರತ ಸಂವಿಧಾನದ 341ನೇ ಅನುಚ್ಛೇದದ ಅಡಿಯಲ್ಲಿ ಮಾಡಿದ ಮತ್ತು ಕಾಲಕಾಲಕ್ಕೆ ತಿದ್ದುಪಡಿ ಮಾಡಲಾದ, ಸಂವಿಧಾನದ (ಅನುಸೂಚಿತ ಜಾತಿಗಳು) ಆದೇಶ, 1950ರಲ್ಲಿ ನಿರ್ದಿಷ್ಟಪಡಿಸಿದ ಅನುಸೂಚಿತ ಜಾತಿಗಳು ಎಂಬ ಉಲ್ಲೇಖವನ್ನು ಹೊಂದಿರತಕ್ಕದ್ದು;

(22) "ಅನುಸೂಚಿತ ಪಂಗಡಗಳು" ಎಂಬುದು, ಭಾರತ ಸಂವಿಧಾನದ 342ನೇ ಅನುಚ್ಛೇದದ ಅಡಿಯಲ್ಲಿ ಮಾಡಿದ ಮತ್ತು ಕಾಲಕಾಲಕ್ಕೆ ತಿದ್ದುಪಡಿ ಮಾಡಲಾದ, ಸಂವಿಧಾನದ (ಅನುಸೂಚಿತ ಪಂಗಡಗಳು) ಆದೇಶ, 1950ರಲ್ಲಿ ನಿರ್ದಿಷ್ಟಪಡಿಸಿದ ಅನುಸೂಚಿತ ಪಂಗಡಗಳು ಎಂಬ ಉಲ್ಲೇಖವನ್ನು ಹೊಂದಿರತಕ್ಕದ್ದು;

(23) "ವಿದ್ಯಾಲಯ (ಸ್ಕೂಲ್)" ಎಂದರೆ, ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಯ ಅಡಿಯಲ್ಲಿಯ ಒಂದು ವಿದ್ಯಾಲಯ (ಸ್ಕೂಲ್);

(24) "ಶಾಸನಗಳು ಮತ್ತು ವಿನಿಯಮಗಳು" ಎಂದರೆ, ಅನುಕ್ರಮವಾಗಿ ವಿಶ್ವವಿದ್ಯಾಲಯವು ಈ ಅಧಿನಿಯಮದ ಅಡಿಯಲ್ಲಿ ಕಾಲಕಾಲಕ್ಕೆ ರಚಿಸಲಾದ ಶಾಸನಗಳು ಮತ್ತು ವಿನಿಯಮಗಳು;

(25) "ವಿದ್ಯಾರ್ಥಿಗಳು" ಎಂದರೆ, ವ್ಯಾಸಂಗ ಕ್ರಮಕ್ಕಾಗಿ ಮತ್ತು ಸಂಶೋಧನೆಗಾಗಿ ವಿಶ್ವವಿದ್ಯಾಲಯದಲ್ಲಿ ಅಥವಾ ಅದರ ಕಾಲೇಜುಗಳಲ್ಲಿ ಅಥವಾ ಇತರ ಮಾನ್ಯತೆ ಪಡೆದ ಸಂಸ್ಥೆಗಳ ಪಟ್ಟಿಯಲ್ಲಿ ದಾಖಲು ಮಾಡಿಕೊಂಡ ವ್ಯಕ್ತಿಗಳು;

(26) "ಅಧ್ಯಾಪಕರು" ಎಂದರೆ, ವಿಶ್ವವಿದ್ಯಾಲಯದಲ್ಲಿ ಅಥವಾ ಅದರ ಯಾವುವೇ ಕಾಲೇಜುಗಳಲ್ಲಿ ಅಥವಾ ವಿಶ್ವವಿದ್ಯಾಲಯವು ನಿರ್ವಹಿಸುವ ಅಥವಾ ಮಾನ್ಯತೆಯನ್ನು ನೀಡಿದ ಸಂಸ್ಥೆಗಳಲ್ಲಿ, ಶಿಕ್ಷಣವನ್ನು ನೀಡುವುದಕ್ಕಾಗಿ ನೇಮಕಗೊಂಡ ಪ್ರಾಧ್ಯಾಪಕರು, ಸಹಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು ಮತ್ತು ಅಂಥ ಇತರ ವ್ಯಕ್ತಿಗಳು ಹಾಗೂ ಶಾಸನಗಳ ಮೂಲಕ ಅಧ್ಯಾಪಕರೆಂದು ಪದನಾಮೀಕರಿಸಿದ ವ್ಯಕ್ತಿಗಳು;

(27) "ಏಕೀಕೃತ ಪದ್ಧತಿ" ಎಂದರೆ, ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿ;

(28) "ವಿಶ್ವವಿದ್ಯಾಲಯ" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ಸ್ಥಾಪಿತವಾದ ಅಥವಾ ಸ್ಥಾಪಿತವಾಗಿದೆಯೆಂದು ಭಾವಿಸಲಾದ ಮತ್ತು ಹಾಗೆ ನಿಗಮಿತವಾದ ಒಂದು ವಿಶ್ವವಿದ್ಯಾಲಯ.

## ಅಧ್ಯಾಯ – *II*

## ವಿಶ್ವವಿದ್ಯಾಲಯಗಳು

**3. ವಿಶ್ವವಿದ್ಯಾಲಯಗಳ ಸ್ಥಾಪನೆ ಮತ್ತು ನಿಗಮನ.–** (1) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000 ರ 3ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಅಥವಾ ಸ್ಥಾಪಿತವಾಗಿದೆಯೆಂದು ಭಾವಿಸಲಾದ ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಮೈಸೂರು ವಿಶ್ವವಿದ್ಯಾಲಯ ಇವುಗಳು ಈ ಅಧಿನಿಯಮದ ಅಡಿಯಲ್ಲಿ ಸ್ಥಾಪಿತವಾಗಿವೆ ಮತ್ತು ನಿಗಮಿತವಾಗಿವೆ ಎಂದು ಭಾವಿಸತಕ್ಕದ್ದು ಮತ್ತು,–

(ಎ) ಧಾರವಾಡದಲ್ಲಿ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿದ ಮತ್ತು ಧಾರವಾಡ, ಗದಗ, ಹಾವೇರಿ ಹಾಗೂ ಉತ್ತರಕನ್ನಡ ಜಿಲ್ಲೆಗಳ ಪ್ರದೇಶದ ಮೇಲೆ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಕರ್ನಾಟಕ ವಿಶ್ವವಿದ್ಯಾಲಯ; ಮತ್ತು

(ಬಿ) ಮೈಸೂರಿನಲ್ಲಿ ಕೇಂದ್ರ ಸ್ಥಾನವನ್ನು ಹೊಂದಿರುವ ಮತ್ತು ಚಾಮರಾಜನಗರ, ಹಾಸನ, ಮಂಡ್ಯ ಹಾಗೂ ಮೈಸೂರು ಜಿಲ್ಲೆಗಳ ಪ್ರದೇಶಗಳ ಮೇಲೆ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಮೈಸೂರು ವಿಶ್ವವಿದ್ಯಾಲಯ.

(2) ಅಧ್ಯಕ್ಷರು, ಕುಲಪತಿಗಳು ಮತ್ತು ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರಾಧಿಕಾರಗಳ ಇತರ ಸದಸ್ಯರು, (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಆ ವಿಶ್ವವಿದ್ಯಾಲಯದ ಹೆಸರಿನಿಂದ ಕರೆಯಲ್ಪಡುವ ಒಂದು ನಿಗಮಿತ ನಿಕಾಯ ಆಗತಕ್ಕದ್ದು.

(3) ಈ ಪ್ರತಿಯೊಂದು ವಿಶ್ವವಿದ್ಯಾಲಯವು ಶಾಶ್ವತ ಉತ್ತರಾಧಿಕಾರವನ್ನು ಮತ್ತು ಸಾಮಾನ್ಯ ಮೊಹರನ್ನು ಹೊಂದಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡಬಹುದು ಮತ್ತು ದಾವೆಗೆ ಗುರಿಯಾಗಬಹುದು.

(4) ವಿಶ್ವವಿದ್ಯಾಲಯವು, ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನೂ ಆರ್ಜಿಸಲು ಮತ್ತು ಧಾರಣ ಮಾಡಲು, ಅದರಲ್ಲಿ ನಿಹಿತವಾಗಿರಬಹುದಾದ ಅಥವಾ ಅದರಿಂದ ಆರ್ಜಿತವಾಗಿರಬಹುದಾದ ಯಾವುದೇ ಚರ ಅಥವಾ ಸ್ಥಿರ ಸ್ವತ್ತುಗಳನ್ನು ಗುತ್ತಿಗೆಗೆ ಕೊಡಲು, ಮಾರಾಟ ಮಾಡಲು ಅಥವಾ ಅನ್ಯಥಾ ವರ್ಗಾವಣೆ ಮಾಡಲು ಮತ್ತು ಈ ಅಧಿನಿಯಮದ ಉದ್ದೇಶಗಳಿಗಾಗಿ ಕರಾರು ಮಾಡಿಕೊಳ್ಳುವುದಕ್ಕೆ ಮತ್ತು ಅವಶ್ಯವಾದ ಇತರ ಎಲ್ಲಾ ಕಾರ್ಯಗಳನ್ನು ಮಾಡುವುದಕ್ಕೆ ಸಕ್ಷಮವಾಗಿರತಕ್ಕದ್ದು.

(5) ವಿಶ್ವವಿದ್ಯಾಲಯದಲ್ಲಿ ನಿಹಿತವಾಗಿರಬಹುದಾದ ಅಥವಾ ಅದು ಆರ್ಜಿಸಿರಬಹುದಾದ ಯಾವುದೇ ಸ್ಥಿರ ಸ್ವತ್ತನ್ನು, ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದುಕೊಳ್ಳದೆ ಗುತ್ತಿಗೆ, ಮಾರಾಟ ಅಥವಾ ಅನ್ಯಥಾ ವರ್ಗಾವಣೆ ಮಾಡತಕ್ಕದ್ದಲ್ಲ.

(6) ವಿಶ್ವವಿದ್ಯಾಲಯದಿಂದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ ವಾದಪತ್ರಗಳಿಗೆ ಮತ್ತು ಸಂಬಂಧಪಟ್ಟ ಇತರ ಕಾಗದ ಪತ್ರಗಳಿಗೆ, ಕುಲಸಚಿವರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂಥ ದಾವೆಗಳಲ್ಲಿನ ಮತ್ತು ವ್ಯವಹರಣೆಗಳಲ್ಲಿನ ಎಲ್ಲಾ ಆದೇಶಿಕೆಗಳನ್ನು ಕುಲಸಚಿವರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

**4. ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು.–** ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು ಈ ಮುಂದಿನಂತೆ ಇರತಕ್ಕದ್ದು,–

(1) ಪ್ರಸ್ತುತ ಸ್ಪರ್ಧಾತ್ಮಕ ಪರಿಸರದಲ್ಲಿ, ರಾಜ್ಯದಲ್ಲಿ ಉನ್ನತ ಕಲಿಕೆಯ ಉದ್ದೇಶವನ್ನು ಮತ್ತಷ್ಟು ಮುಂದುವರಿಸುವುದು;

(2) ತಾನು ಸೂಕ್ತವೆಂದು ಭಾವಿಸಬಹುದಾದಂತೆ, ಕಲಿಕೆಯ ಅಂಥ ಶಾಖೆಗಳಲ್ಲಿ ಬೋಧನಾ ಮತ್ತು ಸಂಶೋಧನಾ ಸೌಲಭ್ಯಗಳನ್ನು ಒದಗಿಸಿ ಜ್ಞಾನ ಪ್ರಸಾರ ಮಾಡುವುದು ಮತ್ತು ಅದನ್ನು ಮುಂದುವರೆಸುವುದು ಮತ್ತು ಅದರ ಸಾಂಸ್ಥಿಕ ಜೀವನದ ಮೇಲುಪಂಕ್ತಿಯಾಗಿ, ಮತ್ತು ವಿಶೇಷವಾಗಿ ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯಕ್ರಮದಲ್ಲಿ ಮಾನವಿಕ ಮತ್ತು ವಿಜ್ಞಾನ ವಿಷಯಗಳಲ್ಲಿ ಸಮಗ್ರ ವ್ಯಾಸಂಗ ವಿಷಯಗಳಿಗಾಗಿ ವಿಶೇಷ ಉಪಬಂಧ ಕಲ್ಪಿಸುವುದು ಮತ್ತು ವಿಶ್ವವಿದ್ಯಾಲಯದಲ್ಲಿ ಅಂತರವಿದ್ಯಾವಿಷಯಗಳ ಅಧ್ಯಯನ ಮತ್ತು ಸಂಶೋಧನೆಗೆ ಉತ್ತೇಜನ ನೀಡುವುದಕ್ಕಾಗಿ ಸೂಕ್ತ ಕ್ರಮ ಕೈಗೊಳ್ಳುವುದು;

(3) ಉನ್ನತ ಕಲಿಕೆಗೆ ಪ್ರವೇಶಾವಕಾಶಗಳನ್ನು ಮತ್ತು ನ್ಯಾಯ ನೀತಿಗೆ ಉತ್ತೇಜನ ನೀಡುವ ದೃಷ್ಟಿಯಿಂದ, ಕಲಿಕೆಯ ವಿಧಾನಗಳು ಮತ್ತು ಸ್ಥಳಗಳು, ವ್ಯಾಸಂಗ ಕ್ರಮಗಳ ಸಂಯೋಜನೆ, ದಾಖಲಾತಿಗಾಗಿ ಅರ್ಹತೆ, ಪ್ರವೇಶದ ವಯಸ್ಸು, ಪರೀಕ್ಷೆಯನ್ನು ನಡೆಸುವುದು ಮತ್ತು ಕಾರ್ಯಕ್ರಮಗಳ ನಿರ್ವಹಣೆಗೆ ಸಂಬಂಧಿಸಿದಂತೆ ನಮ್ಯವಾದ (ಫ್ಲೆಕ್ಸಿಬಲ್) ಮತ್ತು ಮುಕ್ತವಾದ, ವಿಶ್ವವಿದ್ಯಾಲಯ ಮಟ್ಟದ ಶಿಕ್ಷಣದ ನವೀನಾತ್ಮಕ ಪದ್ಧತಿಯನ್ನು ಒದಗಿಸುವುದು ಹಾಗೂ ಜ್ಞಾನದ ಹೊಸ ಕ್ಷೇತ್ರಗಳಲ್ಲಿ ಉತ್ಕೃಷ್ಟತೆಗೆ ಪ್ರೋತ್ಸಾಹಿಸುವುದು;

(4) ಶೈಕ್ಷಣಿಕ ಮತ್ತು ಆಡಳಿತಾತ್ಮಕ ಪ್ರಕಾರ್ಯಗಳ ವಿಕೇಂದ್ರೀಕರಣ ಮತ್ತು ಪ್ರತ್ಯೇಕತೆ ಗೊಳಿಸುವುದಲ್ಲದೇ ಶೈಕ್ಷಣಿಕ ಮತ್ತು ಸಮನ್ವಯ ಕಲಿಕೆ, ಇವೆರೆಡಕ್ಕೂ ಸಮನಾದ ಪ್ರಾಮುಖ್ಯತೆಯನ್ನು ನೀಡುವುದು;

(5) ತನ್ನ ಕಾರ್ಯನೀತಿಗಳು ಮತ್ತು ಕಾರ್ಯಕ್ರಮಗಳ ಮೂಲಕ ರಾಷ್ಟ್ರೀಯ ಸಮಗ್ರತೆ ಮತ್ತು ಮಾನವ ವ್ಯಕ್ತಿತ್ವದ ಸಮಗ್ರ ವಿಕಾಸಕ್ಕೆ ಪ್ರೋತ್ಸಾಹಿಸುವುದು.

**5. ವಿಶ್ವವಿದ್ಯಾಲಯದ ಅಧಿಕಾರಗಳು ಮತ್ತು ಕರ್ತವ್ಯಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ವಿಶ್ವವಿದ್ಯಾಲಯದ ಶಾಸನಗಳ ಮೂಲಕ ನಿಯಮಿಸಬಹುದಾದಂಥ ಷರತ್ತುಗಳಿಗೊಳಪಟ್ಟು, ವಿಶ್ವವಿದ್ಯಾಲಯವು, ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಈ ಮುಂದಿನ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ:–

(1) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಮುಂದುವರೆಸುವುದಕ್ಕೆ ಅವಶ್ಯವಾದ ಸಂಶೋಧನೆ, ಶಿಕ್ಷಣ ಮತ್ತು ಬೋಧನೆಗಾಗಿ ಇರುವ ವಿಶ್ವವಿದ್ಯಾಲಯ ಮತ್ತು ಅಂಥ ವಿದ್ಯಾಲಯಗಳ, ಕೇಂದ್ರಗಳ ಮತ್ತು ಮಂಡಳಿಗಳ ಆಡಳಿತ ನಡೆಸುವುದು ಮತ್ತು ನಿರ್ವಹಿಸುವುದು;

(2) ವಿಶ್ವವಿದ್ಯಾಲಯವು ತಾನು ಸೂಕ್ತವೆಂದು ಭಾವಿಸಬಹುದಾದಂಥ ಜ್ಞಾನದ ಅಥವಾ ಕಲಿಕೆಯ ಅಂಥ ಶಾಖೆಗಳಲ್ಲಿ ಬೋಧನೆಗಾಗಿ ಅವಕಾಶ ಕಲ್ಪಿಸುವುದು ಮತ್ತು ಈ ಅಧಿನಿಯಮದ 3ನೇ ಪ್ರಕರಣದಲ್ಲಿ ಹೇಳಲಾದ ವಿಶ್ವವಿದ್ಯಾಲಯದ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯೊಳಗಿನ ಮುಕ್ತ ಮತ್ತು ದೂರ ಶಿಕ್ಷಣವನ್ನೂ ಒಳಗೊಂಡ ಪದ್ಧತಿಯ ಮೂಲಕ ಅಂಥ ಜ್ಞಾನವನ್ನು ಸಂಶೋಧನೆಗಾಗಿ ಮತ್ತು ಮುಂದುವರಿಕೆಗಾಗಿ ಹಾಗೂ ಪ್ರಸಾರ ಮಾಡುವುದಕ್ಕಾಗಿ ಉಪಬಂಧ ಕಲ್ಪಿಸುವುದು;

(3) ಪದವಿಗಳು, ಡಿಪ್ಲೊಮೊಗಳು, ಪ್ರಮಾಣಪತ್ರಗಳಿಗಾಗಿ ಅಥವಾ ಯಾವುದೇ ಇತರ ಉದ್ದೇಶಕ್ಕಾಗಿ ವ್ಯಾಸಂಗ ಕ್ರಮಗಳನ್ನು ರೂಪಿಸುವುದು ಮತ್ತು ನಿಯಮಿಸುವುದು;

(4) ಫಲಕೇತರ ಬೋಧನೆ (External Mural Teaching) ಮತ್ತು ವಿಸ್ತರಣಾ ಸೇವೆಗಳನ್ನು ವ್ಯವಸ್ಥೆಗೊಳಿಸುವುದು ಮತ್ತು ಕೈಗೊಳ್ಳುವುದು;

(5) ವಿದ್ಯಾರ್ಥಿಗಳ ನಿಯತಕಾಲಿಕ ಮೌಲ್ಯಮಾಪನಕ್ಕಾಗಿ ಪರೀಕ್ಷೆಗಳನ್ನು ನಡೆಸುವುದು;

(6) ವಿಶ್ವವಿದ್ಯಾಲಯವು ನಿರ್ಧರಿಸಬಹುದಾದಂಥ ಷರತ್ತುಗಳಿಗೊಳಪಟ್ಟು, ಡಿಪ್ಲೊಮಾ ಅಥವಾ ಪ್ರಮಾಣ ಪತ್ರಗಳನ್ನು ನೀಡುವುದು ಮತ್ತು ವ್ಯಕ್ತಿಗಳಿಗೆ ಪದವಿಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು ಮತ್ತು ಸೂಕ್ತ ಮತ್ತು ಸಾಕಷ್ಟು ಕಾರಣದಿಂದಾಗಿ ಯಾವುದೇ ಅಂಥ ಡಿಪ್ಲೊಮೊಗಳು, ಪ್ರಮಾಣಪತ್ರಗಳು, ಪದವಿಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಹಿಂದಕ್ಕೆ ಪಡೆಯುವುದು;

(7) ಶಾಸನಗಳು ಮತ್ತು ವಿನಿಯಮಗಳಲ್ಲಿ ಹೇಳಲಾದ ರೀತಿಯಲ್ಲಿ ಗೌರವ ಪದವಿಗಳನ್ನು ಅಥವಾ ಇತರ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು;

(8) ಶಾಸನಗಳ ಮೂಲಕ ನಿಯಮಿಸಬಹುದಾದಂತೆ ಶುಲ್ಕಗಳು ಮತ್ತು ಇತರ ಚಾರ್ಜುಗಳನ್ನು ನಿಗದಿಪಡಿಸುವುದು, ಕೋರುವುದು, ಸಂಗ್ರಹಿಸುವುದು ಮತ್ತು ಪರಿಷ್ಕರಿಸುವುದು;

(9) ವಿದ್ಯಾರ್ಥಿಗಳ ಕಲ್ಯಾಣಕ್ಕಾಗಿ ಸಭಾಂಗಣಗಳು ಮತ್ತು ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸುವುದು ಮತ್ತು ನಿರ್ವಹಿಸುವುದು;

(10) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ನಿವಾಸದ ಸ್ಥಳಗಳನ್ನು ಮಾನ್ಯ ಮಾಡುವುದು ಮತ್ತು ಯಾವುದೇ ಅಂಥ ಸ್ಥಳ ಅಥವಾ ನಿವಾಸಕ್ಕೆ ಕೊಟ್ಟಿರುವ ಮಾನ್ಯತೆಯನ್ನು ಹಿಂದಕ್ಕೆ ಪಡೆಯುವುದು;

(11) ಘಟಕ ಕಾಲೇಜುಗಳನ್ನು ಸ್ಥಾಪಿಸುವುದು ಮತ್ತು ನಡೆಸುವುದು ಹಾಗೂ ಅದರಲ್ಲಿ ಶಿಕ್ಷಣವನ್ನು ನೀಡುವುದರ ಮೇಲ್ವಿಚಾರಣೆ ಮಾಡುವುದು;

(12) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳ ಮುಂದುವರಿಕೆಗಾಗಿ ಅವಶ್ಯವೆಂದು, ಅದು ಅಭಿಪ್ರಾಯಪಡುವ ಸಂಶೋಧನೆ ಮತ್ತು ಬೋಧನೆಗಾಗಿ ಅಂಥ ಕ್ಯಾಂಪಸುಗಳು, ವಿಶೇಷ ಕೇಂದ್ರಗಳು, ವಿಶಿಷ್ಟ ವ್ಯಾಸಂಗ ಕೇಂದ್ರಗಳು, ವಿಶಿಷ್ಟ ಪ್ರಯೋಗಾಲಯಗಳು ಅಥವಾ ಇತರ ಘಟಕಗಳನ್ನು ಸ್ಥಾಪಿಸುವುದು;

(13) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಿವಾಸದ ಮೇಲ್ವಿಚಾರಣೆ ಮತ್ತು ನಿಯಂತ್ರಣ ಮಾಡುವುದು ಹಾಗೂ ಶಿಸ್ತನ್ನು ನಿಯಂತ್ರಿಸುವುದು ಮತ್ತು ಅವರ ಆರೋಗ್ಯ ವರ್ಧನೆಗಾಗಿ ಏರ್ಪಾಡುಗಳನ್ನು ಮಾಡುವುದು;

(14) ವಿದ್ಯಾರ್ಥಿನಿಯರ ನಿವಾಸ, ಶಿಸ್ತು ಮತ್ತು ಬೋಧನೆಯ ಸಂಬಂಧದಲ್ಲಿ ಅಂಥ ಅಗತ್ಯವಾದ ಏರ್ಪಾಡುಗಳನ್ನು ಮಾಡುವುದು;

(15) ವಿಶ್ವವಿದ್ಯಾಲಯವು ಅಗತ್ಯಪಡಿಸಿದಂತೆ ಪ್ರಾಧ್ಯಾಪಕರ, ಸಹಪ್ರಾಧ್ಯಾಪಕರ, ಸಹಾಯಕ ಪ್ರಾಧ್ಯಾಪಕರ, ರೀಡರುಗಳ, ಉಪನ್ಯಾಸಕರ ಮತ್ತು ಇತರ ಯಾವುದೇ ಬೋಧಕ, ಶೈಕ್ಷಣಿಕ ಅಥವಾ ಸಂಶೋಧನಾ ಹುದ್ದೆಗಳನ್ನು ಪ್ರಾರಂಭಿಸುವುದು, ಅಮಾನತ್ತುಗೊಳಿಸುವುದು ಅಥವಾ ರದ್ದುಪಡಿಸುವುದು;

(16) ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ರೀಡರುಗಳು, ಉಪನ್ಯಾಸಕರು ಅಥವಾ ಅನ್ಯಥಾ ಅಧ್ಯಾಪಕರೆಂದು ಮತ್ತು ಸಂಶೋಧಕರೆಂದು ವ್ಯಕ್ತಿಗಳನ್ನು ನೇಮಕ ಮಾಡುವುದು ಅಥವಾ ಮಾನ್ಯ ಮಾಡುವುದು;

(17) ಶೈಕ್ಷಣಿಕ, ತಾಂತ್ರಿಕ, ಆಡಳಿತಾತ್ಮಕ, ಲಿಪಿಕ ಮತ್ತು ಇತರ ಹುದ್ದೆಗಳನ್ನು ಸೃಜಿಸುವುದು ಮತ್ತು ಸರ್ಕಾರದ ಪೂರ್ವ ಸಹಮತಿಯೊಂದಿಗೆ ಅವುಗಳಿಗೆ ನೇಮಕಾತಿಗಳನ್ನು ಮಾಡುವುದು;

(18) ನೌಕರರ ಎಲ್ಲಾ ವರ್ಗಗಳಿಗಾಗಿ ಅವರ ನಡತೆ ಸಂಹಿತೆಯನ್ನು ಒಳಗೊಂಡಂತೆ ಸೇವಾಷರತ್ತುಗಳನ್ನು ವಿಧಿಸುವುದು ಮತ್ತು ವಿಶ್ವವಿದ್ಯಾಲಯದ ನೌಕರರಲ್ಲಿ ಶಿಸ್ತನ್ನು ಒತ್ತಾಯಪಡಿಸುವುದು ಹಾಗೂ ಅವಶ್ಯಕವೆಂದು ಭಾವಿಸಬಹುದಾದಂಥ ಶಿಸ್ತು ಕ್ರಮಗಳನ್ನು ಕೈಕೊಳ್ಳುವುದು;

(19) ಸಂಶೋಧನಾ ವೇತನಗಳು (ಫೆಲೋಶಿಪ್‌ಗಳು), ವಿದ್ಯಾರ್ಥಿವೇತನಗಳು, ಶಿಷ್ಯ ವೇತನಗಳು (ಸ್ಟುಡೆಂಟ್‌ಷಿಪ್‌ಗಳು), ಸಹಾಯಕ ವೇತನಗಳು (ಅಸಿಸ್ಟೆಂಟ್‌ಷಿಪ್‌ಗಳು), ಸ್ಟೈಪೆಂಡುಗಳು, ಟ್ಯುಷನ್‌ವೇವರ್ಸ್, ಪದಕಗಳು ಮತ್ತು ಪ್ರಶಸ್ತಿಗಳನ್ನು ಸ್ಥಾಪಿಸುವುದು ಮತ್ತು ಪ್ರದಾನ ಮಾಡುವುದು;

(20) ಸಂಶೋಧನಾ ಮತ್ತು ಇತರ ವಿಷಯಗಳ ಮುದ್ರಣ, ಪುನರ್‌ಮುದ್ರಣ ಮತ್ತು ಪ್ರಕಟಣೆಗಾಗಿ ಅವಕಾಶವನ್ನು ಕಲ್ಪಿಸುವುದು ಮತ್ತು ಅಂಥ ಉದ್ದೇಶಗಳಿಗಾಗಿ ಪ್ರದರ್ಶನಗಳನ್ನು ಏರ್ಪಡಿಸುವುದು;

(21) ವಿಶ್ವವಿದ್ಯಾಲಯವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಒಪ್ಪಿಕೊಳ್ಳಬಹುದಾದಂಥ ಉದ್ದೇಶಗಳಿಗಾಗಿ, ವಿಶ್ವವಿದ್ಯಾಲಯವು ಸೂಕ್ತವೆಂದು ಭಾವಿಸಬಹುದಾದಂತೆ ಶಿಕ್ಷಣದ ವಿಷಯದ ತರಬೇತಿ ಮತ್ತು ಸಂಶೋಧನಾ ವಿಷಯಗಳ ಸಾರ್ವಜನಿಕ-ಖಾಸಗಿ ಪಾಲುದಾರಿಕೆ ಒಳಗೊಂಡಂತೆ, ಯಾವುದೇ ಇತರ ಸಂಸ್ಥೆಯೊಡನೆ ಪಾಲುದಾರನಾಗುವುದು ಅಥವಾ ಸಹಕಾರ ನೀಡುವುದು;

(22) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳಿಗೆ ಪೂರ್ಣವಾಗಿ ಅಥವಾ ಭಾಗಶ: ಧ್ಯೇಯೋದ್ದೇಶಗಳನ್ನು ಹೊಂದಿರುವ ವಿಶ್ವದ ಯಾವುದೇ ಭಾಗದಲ್ಲಿನ ಉನ್ನತ ಕಲಿಕೆಯ ಸಂಸ್ಥೆಗಳೊಂದಿಗೆ, ಅಧ್ಯಾಪಕರು ಮತ್ತು ತಜ್ಞರನ್ನು ವಿನಿಮಯದ ಮೂಲಕ ಮತ್ತು ಸಾಮಾನ್ಯವಾಗಿ ಅವೇ ಧ್ಯೇಯೋದ್ದೇಶಗಳಿಗೆ ಅನುಕೂಲಕರವಾಗಬಹುದಾದ ರೀತಿಯಲ್ಲಿ ಪಾಲ್ಗೊಳ್ಳುವುದು ಅಥವಾ ಸಹಕಾರ ನೀಡುವುದು;

(23) ಸಂದರ್ಶಕ ಪ್ರಾಧ್ಯಾಪಕರು, ವಿಶ್ರಾಂತ ಪ್ರಾಧ್ಯಾಪಕರು, ಅಧೀನ ಪ್ರಾಧ್ಯಾಪಕರು/ಫ್ಯಾಕಲ್ಟಿ, ಅತಿಥಿ ಫ್ಯಾಕಲ್ಟಿ, ಸಮಾಲೋಚಕರು, ವಿದ್ವಾಂಸರು ಮತ್ತು ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳ ಮುಂದುವರಿಕೆಗಾಗಿ ಕೊಡುಗೆಯನ್ನು ನೀಡಬಹುದಾದಂಥ ಇತರ ವ್ಯಕ್ತಿಗಳನ್ನು ಆಹ್ವಾನಿಸುವುದು ಮತ್ತು/ಅಥವಾ ನೇಮಕ ಮಾಡುವುದು;

(24) ವಿಶ್ವವಿದ್ಯಾಲಯದ ಆವರಣಗಳಲ್ಲಿ ಅಥವಾ ಬೇರೆಡೆಗಳಲ್ಲಿ, ವಿಶ್ವವಿದ್ಯಾಲಯವು ಅವಶ್ಯವೆಂದು ಪರಿಗಣಿಸಬಹುದಾದಂಥ ತರಗತಿ ಕೊಠಡಿಗಳು ಮತ್ತು ಅಧ್ಯಯನ ಸಭಾಂಗಣಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು ಹಾಗೂ ಅಂಥವುಗಳನ್ನು ಸಾಕಷ್ಟು ಸಜ್ಜುಗೊಳಿಸುವುದು ಮತ್ತು ವಿಶ್ವವಿದ್ಯಾಲಯಕ್ಕೆ ಅನುಕೂಲಕರ ಅಥವಾ ಅವಶ್ಯವೆಂದು ಕಂಡುಬರುವಂಥ ಗ್ರಂಥಾಲಯಗಳು ಮತ್ತು ವಾಚನಾಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(25) ವಿಶ್ವವಿದ್ಯಾಲಯದ ವೆಚ್ಚಗಳನ್ನು ನಿಯಂತ್ರಿಸುವುದು ಮತ್ತು ಲೆಕ್ಕಪತ್ರಗಳನ್ನು ನಿರ್ವಹಿಸುವುದು;

(26) ವಿಶ್ವವಿದ್ಯಾಲಯದ ಉದ್ದೇಶಗಳಿಗೆ ಮತ್ತು ಯಾವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯವು ಸ್ಥಾಪಿತವಾಗಿದೆಯೋ ಆ ಧ್ಯೇಯೋದ್ದೇಶಕ್ಕೆ ಸುಸಂಗತವಾಗಿ ಅನುದಾನಗಳು, ಧನಸಹಾಯಗಳು, ವಂತಿಗೆಗಳು, ದೇಣಿಗೆಗಳು ಮತ್ತು ದಾನಗಳನ್ನು ಸ್ವೀಕರಿಸುವುದು;

(27) ವಿಶ್ವವಿದ್ಯಾಲಯವು, ಯೋಗ್ಯ ಮತ್ತು ಸೂಕ್ತವೆಂದು ಭಾವಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ, ವಿಶ್ವವಿದ್ಯಾಲಯದ ಉದ್ದೇಶಕ್ಕಾಗಿ, ಅವಶ್ಯವಾಗಬಹುದಾದ ಅಥವಾ ಅನುಕೂಲಕರವಾಗಿರಬಹುದಾದ ಯಾವುದೇ ಭೂಮಿ ಅಥವಾ ಕಟ್ಟಡ ಅಥವಾ ಕಾಮಗಾರಿಗಳನ್ನು ಅದು ಖರೀದಿಸುವುದು, ಗುತ್ತಿಗೆಯ ಮೇಲೆ ಪಡೆಯುವುದು ಅಥವಾ ದಾನವಾಗಿ ಅಥವಾ ಅನ್ಯಥಾ ಸ್ವೀಕರಿಸುವುದು ಹಾಗೂ ಅಂಥ ಯಾವುದೇ ಕಟ್ಟಡ ಅಥವಾ ಕಾಮಗಾರಿಗಳನ್ನು ನಿರ್ಮಿಸುವುದು ಅಥವಾ ಮಾರ್ಪಾಟು ಮಾಡುವುದು ಮತ್ತು ನಿರ್ವಹಿಸಿಕೊಂಡು ಬರುವುದು;

(28) ಸರ್ಕಾರದ ಪೂರ್ವಾನುಮೋದನೆಯ ಮೇರೆಗೆ, ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಮತ್ತು ಚಟುವಟಿಕೆಗಳಿಗೆ ಬಾಧಕವಾಗದಂತೆ, ವಿಶ್ವವಿದ್ಯಾಲಯವು, ತಾನು ಸೂಕ್ತ ಮತ್ತು ಯುಕ್ತವೆಂದು ಭಾವಿಸಬಹುದಾದಂಥ ನಿಬಂಧನೆಗಳ ಮೇಲೆ, ತನ್ನ ಸ್ಥಿರಾಸ್ತಿಗಳ ಯಾವುದೇ ಭಾಗವನ್ನು ಅಥವಾ ಪೂರ್ಣವಾಗಿ ಮಾರಾಟ ಮಾಡುವುದು, ವಿನಿಮಯ ಮಾಡುವುದು, ಗುತ್ತಿಗೆ ನೀಡುವುದು ಅಥವಾ ಅನ್ಯಥಾ ವಿಲೆ ಮಾಡುವುದು;

(29) ಭಾರತ ಸರ್ಕಾರದ ಹಾಗೂ ಇತರ ಪ್ರಾಮಿಸರಿ ನೋಟುಗಳನ್ನು, ವಿನಿಯಮ ಪತ್ರ, ಚೆಕ್ಕುಗಳು ಅಥವಾ ಇತರ ವರ್ಗಾವಣೀಯ ಲಿಖಿತ ಪತ್ರಗಳನ್ನು ಬರೆಯುವುದು ಮತ್ತು ಸ್ವೀಕರಿಸುವುದು, ತಯಾರಿಸುವುದು ಅಥವಾ ಹಿಂಬರಹ ಬರೆಯುವುದು, ಡಿಸ್ಕೌಂಟ್ ಮಾಡುವುದು ಮತ್ತು ವರ್ಗಾವಣೆ ಮಾಡುವುದು;

(30) ವಿಶ್ವವಿದ್ಯಾಲಯದ ಲಿಖಿತ ಪತ್ರವನ್ನು ಬರೆದುಕೊಡುವುದಕ್ಕಾಗಿ ಅಥವಾ ಯಾವುದೇ ವ್ಯವಹಾರವನ್ನು ಮಾಡುವುದಕ್ಕಾಗಿ ತಾನು ಸೂಕ್ತವೆಂದು ಭಾವಿಸುವಂಥ ಯಾವೊಬ್ಬ ವ್ಯಕ್ತಿಯನ್ನು ನೇಮಕ ಮಾಡುವುದು;

(31) ವಿಶ್ವವಿದ್ಯಾಲಯವು, ತಾನು ಸೂಕ್ತವೆಂದು ಭಾವಿಸುವ ಯಾವುವೇ ತರಗತಿಗಳನ್ನು ಅಥವಾ ವಿದ್ಯಾಲಯಗಳನ್ನು ಅಥವಾ ಕೇಂದ್ರಗಳನ್ನು ಬಿಟ್ಟುಬಿಡುವುದು ಮತ್ತು ನಿಲ್ಲಿಸುವುದು;

(32) ಅನುದಾನಗಳನ್ನು ಪಡೆಯುವುದಕ್ಕಾಗಿ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳು, ವಿಶ್ವವಿದ್ಯಾಲಯ ಅನುದಾನ ಆಯೋಗ ಅಥವಾ ಇತರ ಪ್ರಾಧಿಕಾರಗಳೊಡನೆ ಯಾವುದೇ ಒಪ್ಪಂದವನ್ನು ಮಾಡಿಕೊಳ್ಳುವುದು;

(33) ಸರ್ಕಾರದ ಅನುಮೋದನೆಯೊಂದಿಗೆ, ವಿಶ್ವವಿದ್ಯಾಲಯದ ಆಸ್ತಿಗಳ ಭದ್ರತೆಯ ಮೇಲೆ, ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ಹಣ ಸಾಲ ಪಡೆಯುವುದು ಹಾಗೂ ಹಣ ಸಾಲ ಪಡೆಯುವುದಕ್ಕಾಗಿ ಪ್ರಾಸಂಗಿಕವಾಗಿ ಉಂಟಾದ ಎಲ್ಲಾ ವೆಚ್ಚಗಳನ್ನು ವಿಶ್ವವಿದ್ಯಾಲಯದ ನಿಧಿಯಿಂದ ಸಂದಾಯ ಮಾಡುವುದು ಮತ್ತು ಪಡೆದ ಯಾವುದೇ ಸಾಲವನ್ನು ಮರುಪಾವತಿ ಮಾಡುವುದು ಮತ್ತು ವಿಮೋಚನೆಗೊಳಿಸುವುದು;

(34) ವಿಶ್ವವಿದ್ಯಾಲಯದ ನಿಧಿಗಳು ಅಥವಾ ವಿಶ್ವವಿದ್ಯಾಲಯಕ್ಕೆ ವಹಿಸಿಕೊಟ್ಟಿರುವ ಹಣವನ್ನು ತಾನು ಸೂಕ್ತವೆಂದು ಭಾವಿಸುವಂಥ ಭದ್ರತೆಗಳಲ್ಲಿ ಅಥವಾ ಅವುಗಳ ಮೇಲೆ ಮತ್ತು ಅಂಥ ರೀತಿಯಲ್ಲಿ ಹೂಡುವುದು ಮತ್ತು ಕಾಲಕಾಲಕ್ಕೆ ಯಾವುದೇ ಹೂಡಿಕೆಯನ್ನು ಸ್ಥಳಾಂತರಿಸುವುದು;

(35) ವಿಶ್ವವಿದ್ಯಾಲಯದ ವ್ಯವಹಾರಗಳನ್ನು ಮತ್ತು ಆಡಳಿತವನ್ನು ನಿಯಂತ್ರಿಸುವುದಕ್ಕಾಗಿ ಅವಶ್ಯಕವೆಂದು ಪರಿಗಣಿಸುವಂಥ ಶಾಸನಗಳನ್ನು/ವಿನಿಯಮಗಳನ್ನು ಕಾಲಕಾಲಕ್ಕೆ ರಚಿಸುವುದು ಮತ್ತು ಅವನ್ನು ಬದಲಾಯಿಸುವುದು, ಮಾರ್ಪಡಿಸುವುದು ಮತ್ತು ರದ್ದುಗೊಳಿಸುವುದು;

(36) ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು, ಶೈಕ್ಷಣಿಕ, ತಾಂತ್ರಿಕ, ಆಡಳಿತ ಮತ್ತು ಇತರ ಸಿಬ್ಬಂದಿಯ ಪ್ರಯೋಜನಕ್ಕಾಗಿ, ತಾನು ಸೂಕ್ತವೆಂದು ಭಾವಿಸಬಹುದಾದಂತೆ ನಿವೃತ್ತಿ ವೇತನ, ವಿಮೆ, ಭವಿಷ್ಯನಿಧಿ ಮತ್ತು ಉಪದಾನದಂಥ ಯೋಜನೆಗಳನ್ನು ರಚಿಸುವುದು ಮತ್ತು ವಿಶ್ವವಿದ್ಯಾಲಯದ ಯಾವೊಬ್ಬ ನೌಕರನ ಪ್ರಯೋಜನಕ್ಕಾಗಿ ತಾನು ಸೂಕ್ತವೆಂದು ಭಾವಿಸುವಂಥ ಅನುದಾನಗಳನ್ನು ನೀಡುವುದು ಮತ್ತು ವಿಶ್ವವಿದ್ಯಾಲಯದ ಸಿಬ್ಬಂದಿ ಮತ್ತು ವಿದ್ಯಾರ್ಥಿಗಳ ಪ್ರಯೋಜನಕ್ಕೆಂದು ಉದ್ದೇಶಿಸಲಾದ ಸಂಘಗಳ, ಸಂಸ್ಥೆಗಳ, ನಿಧಿಗಳ, ನ್ಯಾಸಗಳ ಮತ್ತು ಹಸ್ತಾಂತರಣ ಸ್ವತ್ತು ಪತ್ರದ, ಸ್ಥಾಪನೆಗಾಗಿ ಮತ್ತು ಬೆಂಬಲಕ್ಕಾಗಿ ನೆರವು ನೀಡುವುದು;

(37) ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ವಿಶ್ವವಿದ್ಯಾಲಯಗಳು, ಸಂಸ್ಥೆಗಳು ಮತ್ತು ಖ್ಯಾತ ಸಂಶೋಧನಾ ನಿಕಾಯಗಳು, ಶಿಕ್ಷಣದ ವಿವಿಧ ಕ್ಷೇತ್ರಗಳಲ್ಲಿರುವ ಕೈಗಾರಿಕೆ ಮತ್ತು ವೃತ್ತಿಪರ ನಿಕಾಯಗಳೊಂದಿಗೆ, ಒಡಂಬಡಿಕೆ ಪತ್ರ (ಎಂಓಯು) ಹಾಗೂ ಪಾಲುದಾರಿಕೆ ಮಾಡಿಕೊಳ್ಳುವುದು ಹಾಗೂ ಫ್ಯಾಕಲ್ಟಿ ವಿನಿಮಯ, ವಿದ್ಯಾರ್ಥಿಗಳ ವಿನಿಮಯ, ಫ್ಯಾಕಲ್ಟಿ ಅಭಿವೃದ್ಧಿ ಕಾರ್ಯಾಗಾರಗಳು, ಜ್ಞಾನ, ಸಂಪನ್ಮೂಲಗಳು ಹಾಗೂ ಪ್ರಕಟಣೆಗಳು ಇತ್ಯಾದಿಗಳನ್ನು ಹಂಚಿಕೊಳ್ಳುವಂಥ ಕಾರ್ಯಕ್ರಮಗಳನ್ನು ಪ್ರಾರಂಭಿಸುವುದು;

(38) ಸಂಯೋಜಿತ ಕಾಲೇಜುಗಳಂತೆ ವಿಶ್ವವಿದ್ಯಾಲಯದ ವಿಶೇಷಾಧಿಕಾರಗಳಿಗೆ, ವಿಶ್ವವಿದ್ಯಾಲಯವು ಅಂಥ ಉದ್ದೇಶಕ್ಕಾಗಿ ಮತ್ತು ಶಾಸನಗಳ ಮೂಲಕ ನಿಯಮಿಸಬಹುದಾದಂಥ ರೀತಿಯಲ್ಲಿ ಹಾಗೂ ಅಂಥ ಷರತ್ತುಗಳಿಗೆ ಒಳಪಟ್ಟು, ಮಾನ್ಯತೆ ಪಡೆದ ಸಂಸ್ಥೆಗಳಾಗಿ ಸಂಶೋಧನೆ ಅಥವಾ ನಿರ್ದಿಷ್ಟ ಅಧ್ಯಯನಗಳನ್ನು ನಡೆಸುವಂಥ ಕಾಲೇಜನ್ನು ಹೊರತುಪಡಿಸಿ ವಿಶ್ವವಿದ್ಯಾಲಯದೊಳಗೆ ಅಥವಾ ಹೊರಗೆ ಇರುವಂಥ ಯಾವುದೇ ಶೈಕ್ಷಣಿಕ ಸಂಸ್ಥೆಯನ್ನು ಮಾನ್ಯ ಮಾಡುವುದು ಮತ್ತು ಅಂಥ ಮಾನ್ಯತೆಯನ್ನು ಹಿಂತೆಗೆದುಕೊಳ್ಳುವುದು;

(39) ಮೇಲೆ ಹೇಳಿದ ಉದ್ದೇಶಗಳ ಅಥವಾ ಅವುಗಳಲ್ಲಿ ಯಾವುದೊಂದರ ಸಾಧನೆಗಾಗಿ ಅಥವಾ ವಿಸ್ತರಣೆಗಾಗಿ ಅವಶ್ಯಕ, ಅನುಕೂಲಕರ ಅಥವಾ ಆನುಷಂಗಿಕವೆಂದು ವಿಶ್ವವಿದ್ಯಾಲಯವು ಪರಿಗಣಿಸಬಹುದಾದಂತೆ ಅಂಥ ಎಲ್ಲಾ ಇತರೆ ಕಾರ್ಯಗಳು ಮತ್ತು ಕ್ರಮಗಳನ್ನು ಕೈಗೊಳ್ಳುವುದು;

(40) ಏಕೀಕೃತ ವ್ಯವಸ್ಥೆ ಮತ್ತು ಸಂಯೋಜನಾ ವ್ಯವಸ್ಥೆಯ ಅಧಿಕಾರಗಳು ಒಳಗೊಂಡಂತೆ ತಮ್ಮ ಎಲ್ಲಾ ಅಥವಾ ಯಾವುದೇ ಅಧಿಕಾರಗಳನ್ನು ವಿಶ್ವವಿದ್ಯಾಲಯದ ಕುಲಪತಿಗೆ ಅಥವಾ ಸಹ–ಕುಲಪತಿಗಳಿಗೆ ಅಥವಾ ಯಾವುದೇ ಸಮಿತಿ ಅಥವಾ ಯಾವುದೇ ಉಪ–ಸಮಿತಿಗೆ ಅಥವಾ ಯಾವೊಬ್ಬ ಅಥವಾ ಹೆಚ್ಚು ಸದಸ್ಯರಿಗೆ ಅಥವಾ ತನ್ನ ನಿಕಾಯಕ್ಕೆ ಅಥವಾ ತನ್ನ ಅಧಿಕಾರಿಗಳಿಗೆ ವಹಿಸಿಕೊಡುವುದು;

(41) ವಿಶ್ವವಿದ್ಯಾಲಯದ ಸಂಯೋಜನಾ ವ್ಯವಸ್ಥೆಯ ಮೂಲಕ ಸಂಯೋಜಿತ ಕಾಲೇಜುಗಳಾಗಿ ವಿಶ್ವವಿದ್ಯಾಲಯದ ವಿಶೇಷಾಧಿಕಾರಗಳಿಗೆ ಕಾಲೇಜುಗಳನ್ನು ಸೇರಿಸಿಕೊಳ್ಳುವುದು;

(42) ಈ ಅಧಿನಿಯಮದಡಿಯಲ್ಲಿ ರಚಿಸಲಾದ ಶಾಸನಗಳು ಮತ್ತು ವಿನಿಮಯಗಳಿಗನುಸಾರವಾಗಿ ಸಂಯೋಜಿತ ಕಾಲೇಜುಗಳಿಗೆ ಸ್ವಾಯತ್ತತೆಯನ್ನು ಒದಗಿಸುವುದು ಮತ್ತು ಸ್ವಾಯತ್ತ ಕಾಲೇಜುಗಳಾಗಿ ಅವುಗಳನ್ನು ಮಾನ್ಯ ಮಾಡುವುದು.

**6. ಅಧಿಕಾರ ವ್ಯಾಪ್ತಿ, ವಿಶೇಷಾಧಿಕಾರ ಇತ್ಯಾದಿಗಳಿಗೆ ಪ್ರವೇಶಾವಕಾಶ.–** ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿದ ಹೊರತು, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಪ್ರದತ್ತವಾದ ವಿಶ್ವವಿದ್ಯಾಲಯದ ಅಧಿಕಾರಗಳನ್ನು, ವಿಶ್ವವಿದ್ಯಾಲಯ ಪ್ರದೇಶದಲ್ಲಿ ಚಲಾಯಿಸತಕ್ಕದ್ದು ಮತ್ತು ಸದರಿ ಪ್ರದೇಶದ ಹೊರಗಡೆ ಇರುವ ಯಾವುದೇ ಶಿಕ್ಷಣ ಸಂಸ್ಥೆಯು, ವಿಶ್ವವಿದ್ಯಾಲಯದ ಯಾವುವೇ ವಿಶೇಷಾಧಿಕಾರಗಳಿಗೆ ಪ್ರವೇಶ ಪಡೆಯತಕ್ಕದ್ದಲ್ಲ:

ಪರಂತು, ವಿಶ್ವವಿದ್ಯಾಲಯವು, ಅಂಚೆ ತೆರಪಿನ ಶಿಕ್ಷಣ ವ್ಯಾಸಂಗ ಕ್ರಮಗಳ ಅಥವಾ ಬಾಹ್ಯ ಪದವಿ ವ್ಯಾಸಂಗ ಕ್ರಮಗಳ ಪ್ರಯೋಜನವನ್ನು, ವಿಶ್ವವಿದ್ಯಾಲಯ ಪ್ರದೇಶದ ಹೊರಗಡೆ ಇರುವ ವಿದ್ಯಾರ್ಥಿಗಳಿಗೆ ವಿಸ್ತರಿಸಬಹುದು:

ಮತ್ತು ಪರಂತು, ದೇಶದ ಹೊರಗಿರುವ ಶಿಕ್ಷಣ ಸಂಸ್ಥೆಗೆ ಸಂಯೋಜನೆಯನ್ನು ನೀಡುವ ಮೂಲಕ ವಿಶ್ವವಿದ್ಯಾಲಯದೊಡನೆ ಸಂಯೋಜಿತಗೊಳ್ಳಬಹುದು ಮತ್ತು ಅದು ವಿಶ್ವವಿದ್ಯಾಲಯದ ವಿಶೇಷಾಧಿಕಾರಗಳಿಗೆ ಪ್ರವೇಶ ಪಡೆಯಬಹುದು ಮತ್ತು ಈ ಸಂಬಂಧದಲ್ಲಿಯ ಅಂಥ ಅಧಿಕಾರಗಳನ್ನು ವಿಶ್ವವಿದ್ಯಾಲಯವು, ಶಾಸನಗಳಲ್ಲಿ ನಿಯಮಿಸಲಾದ ರೀತಿಯಲ್ಲಿ ಚಲಾಯಿಸತಕ್ಕದ್ದು:

ಅಲ್ಲದೆ ಪರಂತು, ಒಂದು ವಿಶ್ವವಿದ್ಯಾಲಯದ ಪ್ರದೇಶದೊಳಗೆ ಇರುವ ಒಂದು ಶಿಕ್ಷಣ ಸಂಸ್ಥೆಯು, ಯಾವುದೇ ಇತರ ವಿಶ್ವವಿದ್ಯಾಲಯದೊಡನೆ ಸಹವರ್ತಿಸಬಹುದು ಅಥವಾ ಯಾವುವೇ ವಿಶೇಷಾಧಿಕಾರಗಳಿಗೆ ಪ್ರವೇಶ ಪಡೆಯಬಹುದು ಅಥವಾ ಒಂದು ಕಾಲೇಜು, ಯಾವ ವಿಶ್ವವಿದ್ಯಾಲಯದ ಅಧಿಕಾರ ವ್ಯಾಪ್ತಿಯೊಳಗೆ ಇರುವುದೋ ಆ ವಿಶ್ವವಿದ್ಯಾಲಯದೊಡನೆ ಸಮಾಲೋಚಿಸಿ, ಸರ್ಕಾರದ ನಿರ್ದಿಷ್ಟ ಮಂಜೂರಾತಿಯೊಡನೆ, ವಿದೇಶಿ ವಿಶ್ವವಿದ್ಯಾಲಯಗಳೂ ಸೇರಿದಂತೆ, ಸ್ಥಾಪಿತವಾದ ಮತ್ತು ನಿಗಮಿತವಾದ ಯಾವುದೇ ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾಗಬಹುದು. ಅಂಥ ಮಂಜೂರಾತಿ ನೀಡುವ ರೀತಿ ಮತ್ತು ಕಾರ್ಯ ವಿಧಾನವು ಶಾಸನಗಳಲ್ಲಿ ನಿಯಮಿಸಬಹುದಾದಂಥದ್ದಾಗಿರತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಕ್ಕಾಗಿ **"ವಿದೇಶಿ ವಿಶ್ವವಿದ್ಯಾಲಯ"** ಎಂದರೆ, ಸಂಸತ್ತಿನ ಅಥವಾ ಒಂದು ರಾಜ್ಯ ವಿಧಾನಮಂಡಲದ ಅಧಿನಿಯಮದ ಅಡಿಯಲ್ಲಿ ಭಾರತ ಒಳಗಡೆ ಸ್ಥಾಪಿತವಾದ ವಿಶ್ವವಿದ್ಯಾಲಯವಾಗಿರದ ಒಂದು ವಿಶ್ವವಿದ್ಯಾಲಯ.

**7. ವಿಶ್ವವಿದ್ಯಾಲಯವು ಎಲ್ಲಾ ವರ್ಗಗಳ ವ್ಯಕ್ತಿಗಳಿಗೂ ಮುಕ್ತವಾಗಿರತಕ್ಕದ್ದು.–** (1) ವಿಶ್ವವಿದ್ಯಾಲಯವು, ಲಿಂಗ, ಜಾತಿ, ಪಂಥ, ವಿಕಲತೆ, ಜನಾಂಗ ಅಥವಾ ಸಾಮಾಜಿಕ–ಆರ್ಥಿಕ ಹಿನ್ನಲೆ ಯಾವುದೇ ಇರಲಿ ಎಲ್ಲಾ ವ್ಯಕ್ತಿಗಳಿಗೂ ಮುಕ್ತವಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕನಾಗಿ

ನೇಮಕವಾಗಲು ಅಥವಾ ಅದರಲ್ಲಿ ಯಾವುದೇ ಪದವನ್ನು ಧಾರಣ ಮಾಡಲು ಅಥವಾ ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಯಾಗಿ ಪ್ರವೇಶ ಪಡೆಯಲು ಅಥವಾ ಅದರಲ್ಲಿ ಪದವೀಧರನಾಗಲು ಅಥವಾ ಅಲ್ಲಿನ ಯಾವುದೇ ವಿಶೇಷಾಧಿಕಾರಗಳನ್ನು ಅನುಭವಿಸಲು ಅಥವಾ ಚಲಾಯಿಸಲು ಆತನನ್ನು ಹಕ್ಕುಳ್ಳವನನ್ನಾಗಿ ಮಾಡುವ ಸಲುವಾಗಿ, ಯಾವೊಬ್ಬ ವ್ಯಕ್ತಿಯು, ಧಾರ್ಮಿಕ ನಂಬಿಕೆ ಅಥವಾ ವೃತ್ತಿಗೆ ಸಂಬಂಧಿಸಿದಂತೆ ಯಾವುದೇ ಪರೀಕ್ಷೆಯನ್ನು ತೆಗೆದುಕೊಳ್ಳುವಂತೆ ಮಾಡುವುದು ಅಥವಾ ವಿಧಿಸುವುದು ವಿಶ್ವವಿದ್ಯಾಲಯಕ್ಕೆ ಕಾನೂನುಬದ್ಧವಾಗಿರತಕ್ಕದ್ದಲ್ಲ.

(2) (1)ನೇ ಉಪ-ಪ್ರಕರಣದ ಉಪಬಂಧಗಳಿಗೊಳಪಟ್ಟು, ವಿಶ್ವವಿದ್ಯಾಲಯವು, ಸರ್ಕಾರದ ವಿಶೇಷ ಅಥವಾ ಸಾಮಾನ್ಯ ನಿರ್ದೇಶನಗಳಿಗನುಸಾರವಾಗಿ, ಈ ಕೆಳಕಂಡ ವರ್ಗಗಳ ವ್ಯಕ್ತಿಗಳಿಗಾಗಿ, ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಅಥವಾ ನಿಯಂತ್ರಿಸುತ್ತಿರುವ ಯಾವುದೇ ಕಾಲೇಜು ಅಥವಾ ಸಂಸ್ಥೆಯಲ್ಲಿ ವಿದ್ಯಾರ್ಥಿಗಳ ಪ್ರವೇಶದ ಉದ್ದೇಶಗಳಿಗಾಗಿ ಸ್ಥಾನಗಳನ್ನು ಮೀಸಲಿರಿಸತಕ್ಕದ್ದು, ಎಂದರೆ:-

(i) ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳು;

(ii) ಇತರ ಹಿಂದುಳಿದ ವರ್ಗಗಳು;

(iii) ಕೇಂದ್ರ ಅಥವಾ ರಾಜ್ಯ ಸರ್ಕಾರದಿಂದ ನಾಮ ನಿರ್ದೇಶಿತರಾದವರು;

(iv) ರಕ್ಷಣಾ ಸಿಬ್ಬಂದಿ ಮತ್ತು ಮಾಜಿ ಸೈನಿಕರು ಮತ್ತು ಅವರ ಮಕ್ಕಳು;

(v) ದೈಹಿಕವಾಗಿ ಅಂಗವಿಕಲತೆಯುಳ್ಳ ವ್ಯಕ್ತಿಗಳು (ಸಮಾನ ಅವಕಾಶಗಳು, ಹಕ್ಕುಗಳ ಸಂರಕ್ಷಣೆ ಮತ್ತು ಸಂಪೂರ್ಣ ಭಾಗವಹಿಸುವಿಕೆ) ಅಧಿನಿಯಮ, 1995ರ (1996ರ ಕೇಂದ್ರ ಅಧಿನಿಯಮ 1) ಅಡಿಯಲ್ಲಿ ಪರಿಭಾಷಿಸಲಾದ ಅಂಗವಿಕಲರು;

**8. ಸಂದರ್ಶಕರು.**- (1) ಕರ್ನಾಟಕದ ರಾಜ್ಯಪಾಲರು ವಿಶ್ವವಿದ್ಯಾಲಯದ ಸಂದರ್ಶಕರಾಗಿರತಕ್ಕದ್ದು.

(2) ಸಂದರ್ಶಕರು, ವಿಶ್ವವಿದ್ಯಾಲಯದ ಕಾರ್ಯನಿರ್ವಹಣೆಯ ಸುಧಾರಣೆಗಳನ್ನು ಸಲಹೆ ನೀಡಲು ಹಕ್ಕುಳ್ಳವರಾಗಿರತಕ್ಕದ್ದು.

**9. ಪ್ರಧಾನ ಮುಖ್ಯಾಧಿಕಾರಿ (ರೆಕ್ಟರ್).**- (1) ಉನ್ನತ ಶಿಕ್ಷಣ ಸಚಿವರು ವಿಶ್ವವಿದ್ಯಾಲಯದ ಪ್ರಧಾನ ಮುಖ್ಯಾಧಿಕಾರಿಯಾಗಿರತಕ್ಕದ್ದು.

(2) ಪ್ರಧಾನ ಮುಖ್ಯಾಧಿಕಾರಿಯವರು, ವಿಶ್ವವಿದ್ಯಾಲಯದ ಆಡಳಿತಾತ್ಮಕ, ಆರ್ಥಿಕ ಅಥವಾ ಇತರ ವ್ಯವಹಾರಗಳಿಗೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ವರದಿಯನ್ನು ತರಿಸಿಕೊಳ್ಳುವ ಹಾಗೂ ಅದರ ಸುಧಾರಣೆಗಾಗಿ ಸಲಹೆಗಳನ್ನು ನೀಡಲು ಅಧಿಕಾರ ಹೊಂದಿರತಕ್ಕದ್ದು ಮತ್ತು ಕುಲಪತಿಯವರು, ಪ್ರಧಾನ ಮುಖ್ಯಾಧಿಕಾರಿಯವರ ಅಭಿಪ್ರಾಯಗಳನ್ನು ಪರಿಗಣನೆಗಾಗಿ ಆಡಳಿತ ಮಂಡಳಿಗೆ ತಿಳಿಸತಕ್ಕದ್ದು.

**10. ಶಿಸ್ತು, ಪರಿವೀಕ್ಷಣೆ ಮತ್ತು ನಿಯಂತ್ರಣ.**- (1) ಅಧ್ಯಕ್ಷರು, ತಾವಾಗಿಯೇ ಅಥವಾ ಸರ್ಕಾರದ ಅಥವಾ ಓಂಬುಡ್ಸ್‌ಮನ್‌ರ ಅಥವಾ ಆಡಳಿತ ಮಂಡಳಿಯ ಶಿಫಾರಸ್ಸಿನ ಮೇರೆಗೆ, ವಿಶ್ವವಿದ್ಯಾಲಯವು ನಿರ್ವಹಿಸುವ, ಆಡಳಿತ ನಡೆಸುವ, ಅದರಿಂದ ಮಾನ್ಯತೆ ಪಡೆದಿರುವ ಅಥವಾ ಅನುಮೋದಿತವಾಗಿರುವ ಸ್ವತ್ತುಗಳು ಮತ್ತು ಮೂಲಸೌಕರ್ಯಗಳು, ಚರ ಅಥವಾ ಸ್ಥಿರ ಆಸ್ತಿಗಳ ಬಗ್ಗೆ ಮತ್ತು ವಿಶ್ವವಿದ್ಯಾಲಯವು ನಡೆಸಿದ ಅಥವಾ ಮಾಡಿದ ಪರೀಕ್ಷೆಗಳು, ಬೋಧನೆ ಮತ್ತು ಇತರ ಕಾಮಗಾರಿಗಳ ಬಗ್ಗೆ ಮತ್ತು ಕುಲಪತಿಯವರನ್ನು ಹೊರತುಪಡಿಸಿ, ವಿಶ್ವವಿದ್ಯಾಲಯವು, ಯಾವೊಬ್ಬ ನೌಕರನ ವಿರುದ್ಧ, ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಆನುಷಂಗಿಕವಾದ ಯಾವುದೇ ವಿಷಯದ ಸಂಬಂಧದಲ್ಲಿ, ಯಾವುದೇ ನಿರ್ದಿಷ್ಟ ಆಪಾದನೆಗಳ ಬಗ್ಗೆ ತಾನು ಸೂಕ್ತವೆಂದು ಭಾವಿಸಬಹುದಾದ ಯಾವೊಬ್ಬ ಸಕ್ಷಮ ಪ್ರಾಧಿಕಾರದಿಂದ ಪರಿವೀಕ್ಷಣೆ ಮಾಡಿಸಬಹುದು:

ಪರಂತು, ಅಂಥ ಶಿಫಾರಸ್ಸುಗಳನ್ನು ಸರ್ಕಾರವು ಮಾಡಿದಾಗ, ಅಧ್ಯಕ್ಷರು, ಸರ್ಕಾರದ ಆದೇಶಗಳಲ್ಲಿ ನಿರ್ದಿಷ್ಟಪಡಿಸಿದಂತೆ ಸರ್ಕಾರದ ನಿರ್ದೇಶನಗಳನ್ನು ಪಾಲಿಸುವಲ್ಲಿ ಕೈಗೊಂಡ ಕ್ರಮದ ಬಗ್ಗೆ ಒಂದು ವರದಿಯನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಪರಿವೀಕ್ಷಣೆ ಅಥವಾ ವಿಚಾರಣೆಯನ್ನು ಮಾಡಲು ನಿರ್ದೇಶಿಸಲಾದ ಪ್ರಾಧಿಕಾರಕ್ಕೆ, ಆ ಉದ್ದೇಶಕ್ಕಾಗಿ ಸಂಬಂಧಪಟ್ಟ ಸಂಸ್ಥೆಗಳನ್ನು ಮತ್ತು ಆವರಣಗಳನ್ನು ಪ್ರವೇಶಿಸಲು ಮತ್ತು ಅಗತ್ಯವಾಗಬಹುದಾದಂಥ ಲೆಕ್ಕಪತ್ರಗಳನ್ನು ಅಥವಾ ಇತರ ದಾಖಲೆಗಳನ್ನು ಪರಿವೀಕ್ಷಿಸಲು ಅವಕಾಶವಿರತಕ್ಕದ್ದು.

(3) ಪ್ರಾಧಿಕಾರವು, ಪರಿವೀಕ್ಷಣೆಯ ಅಥವಾ ವಿಚಾರಣೆಯ ಫಲಿತಾಂಶದ ವರದಿಯನ್ನು ಅಧ್ಯಕ್ಷರಿಗೆ ಸಲ್ಲಿಸತಕ್ಕದ್ದು.

(4) ಪರಿವೀಕ್ಷಣೆಯ ವರದಿಯನ್ನು ಸ್ವೀಕರಿಸಿದ ಕೂಡಲೇ, ಅಧ್ಯಕ್ಷರು, ಅದರ ಮೇಲೆ ತನ್ನ ತೀರ್ಮಾನಗಳನ್ನು ದಾಖಲಿಸತಕ್ಕದ್ದು ಮತ್ತು ಆಡಳಿತ ಮಂಡಳಿಗೆ ನಿರ್ದೇಶನಗಳನ್ನು ನೀಡತಕ್ಕದ್ದು ಹಾಗೂ ಆಡಳಿತ ಮಂಡಳಿಯು, ಅಧ್ಯಕ್ಷರ ನಿರ್ದೇಶನಗಳನ್ನು ಅನುಷ್ಠಾನಗೊಳಿಸತಕ್ಕದ್ದು.

(5) ಕುಲಪತಿಯವರು, ಅಂಥ ನಿರ್ದೇಶನಗಳನ್ನು ಅನುಷ್ಠಾನಗೊಳಿಸಲು ಹೊಣೆಗಾರನಾಗಿರತಕ್ಕದ್ದು ಮತ್ತು ಅಂಥ ಪಾಲನೆಯನ್ನು ಅಧ್ಯಕ್ಷರಿಗೆ ವರದಿ ಮಾಡತಕ್ಕದ್ದು.

**11. ನಿರ್ದೇಶನಗಳನ್ನು ನೀಡಲು ಅಧಿಕಾರ.**- ಅಧ್ಯಕ್ಷರು, ತಾವಾಗಿಯೇ ಅಥವಾ ಸರ್ಕಾರದ ಅಥವಾ ಓಂಬುಡ್ಸ್‌ಮನ್‌ರ ಶಿಫಾರಸ್ಸಿನ ಮೇರೆಗೆ, ವಿಶ್ವವಿದ್ಯಾಲಯದ ಆಡಳಿತ ಮತ್ತು ಶೈಕ್ಷಣಿಕ ಕಾರ್ಯ ನಿರ್ವಹಣೆ ಇವೆರಡರ ಹಿತಾಸಕ್ತಿಯಲ್ಲಿ ಮತ್ತು ವಿಶೇಷವಾಗಿ ಶಾಂತಿ ಮತ್ತು ನೆಮ್ಮದಿಯನ್ನು ಕಾಯ್ದುಕೊಂಡುಬರುವ ದೃಷ್ಟಿಯಿಂದ ಮತ್ತು ಸ್ವತ್ತು ಮತ್ತು ಹಣಕಾಸು ವ್ಯವಸ್ಥೆಯನ್ನು ಸಂರಕ್ಷಿಸುವುದಕ್ಕಾಗಿ ಅವಶ್ಯ ಅಥವಾ ಯುಕ್ತವಾಗಬಹುದಾದಂಥ ನಿರ್ದೇಶನಗಳನ್ನು ನೀಡಬಹುದು.

**12. ವಿಶ್ವವಿದ್ಯಾಲಯದ ಪದ್ಧತಿಗಳು.**- ವಿಶ್ವವಿದ್ಯಾಲಯದಲ್ಲಿ ಎರಡು ಪದ್ಧತಿಗಳಿರತಕ್ಕದ್ದು, ಎಂದರೆ:-

(1) ಒಂದು ಅಥವಾ ಹಲವು ಕ್ಯಾಂಪಸುಗಳಲ್ಲಿರುವ, ವಿಶ್ವವಿದ್ಯಾಲಯ ವಿದ್ಯಾಲಯಗಳು ಮತ್ತು ಘಟಕ ಕಾಲೇಜುಗಳನ್ನು ಹೊಂದಿರುವ ಮತ್ತು ಸ್ನಾತಕೋತ್ತರ ಅಧ್ಯಯನಗಳಿಗೆ ಮತ್ತು ಸಂಶೋಧನೆಗೆ ಹೆಚ್ಚಿನ ಒತ್ತುನೀಡುವ ಏಕೀಕೃತ ಪದ್ಧತಿ.

(2) ಕಲಿಕೆಯ ವಿವಿಧ ವಲಯಗಳಲ್ಲಿ ವಿಚಾರ ವಿನಿಮಯಕ್ಕೆ ಒಟ್ಟಾಗಿ ಪ್ರೋತ್ಸಾಹಿಸುವುದಕ್ಕಾಗಿ ಮತ್ತು ಸಾಧ್ಯವಾಗುವಂತೆ ಮಾಡುವುದಕ್ಕಾಗಿ ಒಂದು ಅಥವಾ ಹೆಚ್ಚು ಕ್ಯಾಂಪಸ್ಸುಗಳಿರುವ ಅನೇಕ ಕಾಲೇಜುಗಳನ್ನು ಹೊಂದಿರುವ, ಸಂಯೋಜನಾ ಪದ್ಧತಿ.

ಈ ಪದ್ಧತಿಗಳು, ವಿಶ್ವವಿದ್ಯಾಲಯದ ಪ್ರಕಾರ್ಯಗಳನ್ನು ವಿಭಜಿಸತಕ್ಕದ್ದು ಮತ್ತು ಈ ಅಧಿನಿಯಮದಲ್ಲಿ ಉಪಬಂಧಿಸಲಾದ ಅಧಿಕಾರಗಳು, ಶಾಖೆಗಳು ಮತ್ತು ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು.

## ಅಧ್ಯಾಯ – *III*

## ವಿಶ್ವವಿದ್ಯಾಲಯದ ಅಧಿಕಾರಿಗಳು

**13. ಈ ಮುಂದಿನವರು ವಿಶ್ವವಿದ್ಯಾಲಯದ ಅಧಿಕಾರಿಗಳಾಗಿರತಕ್ಕದ್ದು:–**

**(1) ಎರಡೂ ಪದ್ಧತಿಗಳಿಗೆ ಸಾಮಾನ್ಯವಾಗಿರಬೇಕಾದ ಅಧಿಕಾರಿಗಳು:**

1. ಅಧ್ಯಕ್ಷರು
2. ಕುಲಪತಿ
3. ಕುಲಸಚಿವರು
4. ಹಣಕಾಸು ಅಧಿಕಾರಿ

**(2) ಏಕೀಕೃತ ಪದ್ಧತಿಯ ಅಡಿಯಲ್ಲಿಯ ಅಧಿಕಾರಿಗಳು:**

1. ಸಹ–ಕುಲಪತಿ (ಏಕೀಕೃತ ಪದ್ಧತಿ),
2. ವಿದ್ಯಾಲಯಗಳ ಡೀನ್‌ರುಗಳು,
3. ಜ್ಞಾನ ಸಂಪನ್ಮೂಲಗಳ ನಿರ್ದೇಶಕರು,
4. ದೈಹಿಕ ಶಿಕ್ಷಣ ಮತ್ತು ವಿದ್ಯಾರ್ಥಿ ಕಲ್ಯಾಣದ ನಿರ್ದೇಶಕರು,
5. ಅನ್ವೇಷಣೆ, ಸಂಶೋಧನೆ ಮತ್ತು ಗುಣಮಟ್ಟ ನಿರ್ದೇಶಕರು,
6. ಈ ಅಧಿನಿಯಮದಡಿಯಲ್ಲಿ ಶಾಸನಗಳ ಮೂಲಕ ಪದನಾಮೀಕರಿಸ ಬಹುದಾದಂಥ ಇತರ ಅಧಿಕಾರಿಗಳು

**(3) ಸಂಯೋಜನಾ ಪದ್ಧತಿಯ ಅಡಿಯಲ್ಲಿಯ ಅಧಿಕಾರಿಗಳು:**

1. ಸಂಯೋಜನಾ ಪದ್ಧತಿಯ ಸಹ–ಕುಲಪತಿ,
2. ಸಂಯೋಜನಾ ಮತ್ತು ಪರೀಕ್ಷಾ ಮಂಡಳಿಯ ನಿರ್ದೇಶಕರು,
3. ಅಧ್ಯಯನ ಮಂಡಳಿಯ ನಿರ್ದೇಶಕರು,
4. ಮುಕ್ತ ಮತ್ತು ದೂರ ಶಿಕ್ಷಣ ನಿರ್ದೇಶಕರು,
5. ಈ ಅಧಿನಿಯಮದಡಿಯಲ್ಲಿ ಶಾಸನಗಳ ಮೂಲಕ ಪದನಾಮೀಕರಿಸ ಬಹುದಾದಂಥ ಇತರ ಅಧಿಕಾರಿಗಳು.

**14. ಅಧ್ಯಕ್ಷರು.–** (1) ವಿಶ್ವವಿದ್ಯಾಲಯದ ಅಧ್ಯಕ್ಷರು, ಶೈಕ್ಷಣಿಕ ಕ್ಷೇತ್ರ, ಶೈಕ್ಷಣಿಕ ಸಂಶೋಧನೆ, ಕೈಗಾರಿಕೆ ಮತ್ತು ನ್ಯಾಯಾಂಗ ಅಥವಾ ಅಂಥ ಇತರ ವೃತ್ತಿಗಳಲ್ಲಿ ಶ್ರೇಷ್ಠ ಸಾಧನೆ ಮಾಡಿರುವ ಸುಪ್ರಸಿದ್ಧ ವ್ಯಕ್ತಿಯಾಗಿರತಕ್ಕದ್ದು. ಕರ್ನಾಟಕದ ಮುಖ್ಯಮಂತ್ರಿಗಳು, ಕರ್ನಾಟಕ ವಿಧಾನಸಭೆಯ ವಿರೋಧಪಕ್ಷದ ನಾಯಕರು, ಕರ್ನಾಟಕ ವಿಧಾನಸಭೆಯ ಸಭಾಧ್ಯಕ್ಷರು, ಕರ್ನಾಟಕದ ಮುಖ್ಯ ನ್ಯಾಯಾಧೀಶರು ಅಥವಾ ಕರ್ನಾಟಕ ಉಚ್ಚ ನ್ಯಾಯಾಲಯದ ಹಾಲಿ ನ್ಯಾಯಾಧೀಶರ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತರು ಮತ್ತು ಉನ್ನತ ಶಿಕ್ಷಣ ಸಚಿವರು ಇವರನ್ನು ಒಳಗೊಂಡ ಸಮೂಹದ (ಕಲೀಜಿಅಮ್) ಮೂಲಕ ಅವರನ್ನು ನೇಮಕಮಾಡತಕ್ಕದ್ದು.

(2) ಮುಖ್ಯಮಂತ್ರಿಗಳು ಕಲೀಜಿಅಮ್‌ನ ಅಧ್ಯಕ್ಷತೆ ವಹಿಸತಕ್ಕದ್ದು.

(3) ಕರ್ನಾಟಕ ಉನ್ನತ ಶಿಕ್ಷಣ ಪರಿಷತ್ತು ಕಲೀಜಿಅಮ್‌ನ ಸಭೆಯನ್ನು ನಡೆಸತಕ್ಕದ್ದು.

(4) ಅಧ್ಯಕ್ಷರ ಪದಾವಧಿಯು ಐದು ವರ್ಷಗಳಾಗಿರತಕ್ಕದ್ದು. ಅವರು ಮರುನೇಮಕಾತಿಗೆ ಅರ್ಹರಾಗಿರತಕ್ಕದ್ದಲ್ಲ.

(5) ಅಧ್ಯಕ್ಷರು, ತಮ್ಮ ಪದದ ಬಲದಿಂದಾಗಿ, ವಿಶ್ವವಿದ್ಯಾಲಯದ ಮುಖ್ಯಸ್ಥರಾಗಿರತಕ್ಕದ್ದು.

(6) ಅಧ್ಯಕ್ಷರು ಘಟಿಕೋತ್ಸವದ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(7) ಅಧ್ಯಕ್ಷರು, ಈ ಅಧಿನಿಯಮದ/ಶಾಸನಗಳ/ವಿನಿಯಮಗಳ ಮತ್ತು ಅವುಗಳ ಮೂಲಕ ಪ್ರದತ್ತವಾಗಬಹುದಾದಂಥ ಅಧಿಕಾರಗಳನ್ನು ಹೊಂದಿರತಕ್ಕದ್ದು.

**15. ಕುಲಪತಿ.–** ಕುಲಪತಿಯವರು, ಗಮನಾರ್ಹವಾದ ಶೈಕ್ಷಣಿಕ ಮತ್ತು ಸಂಶೋಧನಾ ಕೊಡುಗೆಗಳನ್ನು ನೀಡಿರುವ, ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿ ಕನಿಷ್ಠ ಹತ್ತು ವರ್ಷಗಳ ಅನುಭವ ಹೊಂದಿರುವ ಶಿಕ್ಷಣ ವಿಷಯಗಳಲ್ಲಿ ಸುಪ್ರಸಿದ್ಧ ತಜ್ಞರಾಗಿರತಕ್ಕದ್ದು ಅಥವಾ ಶ್ರೇಷ್ಠ ಶಿಕ್ಷಣ

ತಜ್ಞರಾಗಿರತಕ್ಕದ್ದು. ಅವರನ್ನು, ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತು ರಚಿಸಿದ ಶೋಧನಾ ಸಮಿತಿಯು ಶಿಫಾರಸ್ಸು ಮಾಡಿದ ಮೂವರು ಸದಸ್ಯರ ಪಟ್ಟಿಯಿಂದ ಅಧ್ಯಕ್ಷರು ನೇಮಕ ಮಾಡತಕ್ಕದ್ದು.

(ಎ) ಕುಲಪತಿಯವರ ನೇಮಕಾತಿಗಾಗಿ, ಅಧ್ಯಕ್ಷರಿಗೆ ಸೂಕ್ತವಾದ ಹೆಸರುಗಳನ್ನು ಶಿಫಾರಸ್ಸು ಮಾಡುವುದಕ್ಕಾಗಿ ಶೋಧನಾ ಸಮಿತಿಯು ಈ ಕೆಳಗಿನ ಸದಸ್ಯರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಅಧ್ಯಕ್ಷರು ನಾಮನಿರ್ದೇಶಿಸಿದ ಒಬ್ಬ ಸದಸ್ಯರು, ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರು ಅಥವಾ ಉಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶ ಅಥವಾ ಸುಪ್ರಸಿದ್ಧ ವಿಜ್ಞಾನಿ ಅಥವಾ ರಾಷ್ಟ್ರೀಯ ಖ್ಯಾತಿಹೊಂದಿರುವ ಶಿಕ್ಷಣ ತಜ್ಞರಾಗಿರತಕ್ಕದ್ದು;

(ii) ಸರ್ಕಾರದಿಂದ ನಾಮನಿರ್ದೇಶಿತರಾದ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿ;

(iii) ಭಾರತೀಯ ತಂತ್ರಜ್ಞಾನ ಸಂಸ್ಥೆ (ಐಐಟಿ), ಭಾರತೀಯ ಮ್ಯಾನೇಜ್‌ಮೆಂಟ್ ಸಂಸ್ಥೆ (ಐಐಎಂ), ಭಾರತೀಯ ವಿಜ್ಞಾನ ಸಂಸ್ಥೆ (ಐಐಎಸ್), ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆ (ಐಎಸ್‌ಆರ್‌ಓ) ಅಥವಾ ರಾಷ್ಟ್ರೀಯ ಸಂಶೋಧನಾ ಪ್ರಯೋಗಾಲಯ (ಎನ್‌ಆರ್‌ಎಲ್) ಗಳಂಥ ರಾಷ್ಟ್ರೀಯ ಖ್ಯಾತಿಯ ಒಂದು ಸಂಸ್ಥೆ ಅಥವಾ ಸಂಘಟನೆಯ ನಿರ್ದೇಶಕರು ಅಥವಾ ಮುಖ್ಯಸ್ಥರು ಅಥವಾ ಆಡಳಿತ ಮಂಡಳಿಯಿಂದ ನಾಮನಿರ್ದೇಶಿತನಾದ ಪ್ರಖ್ಯಾತ ಶಿಕ್ಷಣ ತಜ್ಞ;

(iv) ವಿಶ್ವವಿದ್ಯಾಲಯ ಅನುದಾನಗಳ ಆಯೋಗದಿಂದ ನಾಮನಿರ್ದೇಶಿತನಾದ ಒಬ್ಬ ಸದಸ್ಯ, ಅವರು ಕೇಂದ್ರ ವಿಶ್ವವಿದ್ಯಾಲಯದ ಹಾಲಿ ಅಥವಾ ಮಾಜಿ ಕುಲಪತಿಯವರಾಗಿರತಕ್ಕದ್ದು;

(v) ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ಸದಸ್ಯ ಕಾರ್ಯದರ್ಶಿಯು ಶೋಧನಾ ಸಮಿತಿಯ ಸಂಚಾಲಕನಾಗಿರತಕ್ಕದ್ದು.

(2) ಅಂಥ ನೇಮಕಾತಿಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು.

(3) ಯಾವೊಬ್ಬ ವ್ಯಕ್ತಿಯು, 67 ವರ್ಷಗಳ ವಯಸ್ಸಿನವನಾಗಿದ್ದರೆ, ಆತನನ್ನು ಕುಲಪತಿಯನ್ನಾಗಿ ನೇಮಕ ಮಾಡತಕ್ಕದ್ದಲ್ಲ ಅಥವಾ ಆತನು ಆ ಪದವನ್ನು ಧಾರಣಮಾಡತಕ್ಕದ್ದಲ್ಲ.

(4) ಕುಲಪತಿಯು ಐದು ವರ್ಷಗಳ ಅವಧಿಗಾಗಿ ಪದ ಧಾರಣ ಮಾಡತಕ್ಕದ್ದು. ಆತನು, ಎರಡನೇ ಅವಧಿಗಾಗಿ ಮರು ನೇಮಕಾತಿಗೆ ಅರ್ಹನಾಗತಕ್ಕದ್ದಲ್ಲ.

(5) ಕುಲಪತಿಯವರು, ಈ ಅಧಿನಿಯಮ ಅಥವಾ ಅದರಡಿಯಲ್ಲಿ ರಚಿಸಲಾದ ಶಾಸನಗಳ ಅಥವಾ ನಿಯಮಗಳ ಅಥವಾ ವಿನಿಯಮಗಳ ಉಪಬಂಧಗಳನ್ನು ಕಾರ್ಯಗತಗೊಳಿಸುವುದನ್ನು ಉದ್ದೇಶಪೂರ್ವಕವಾಗಿ ಕೈಬಿಟ್ಟಿದ್ದಾರೆ ಅಥವಾ ಕಾರ್ಯಗತಗೊಳಿಸಲು ನಿರಾಕರಿಸಿದ್ದಾರೆ ಅಥವಾ ಅವರಲ್ಲಿ ನಿಹಿತವಾದ ಅಧಿಕಾರಗಳನ್ನು ದುರುಪಯೋಗಪಡಿಸಿಕೊಂಡಿದ್ದಾರೆ ಎಂಬ ಕಾರಣದ ಮೇಲೆ ಅಥವಾ (6) ನೇ ಉಪಪ್ರಕರಣದ ಅಡಿಯಲ್ಲಿ, ಅಧ್ಯಕ್ಷರು ಆದೇಶಿಸಿದ ವಿಚಾರಣೆಯ ವರದಿಯ ಆಧಾರದ ಮೇಲೆ ಅಧ್ಯಕ್ಷರು ಹೊರಡಿಸಿದ ಆದೇಶದ ಮೂಲಕವಾಗಿ ಅಲ್ಲದೆ ಅವರನ್ನು ಪದದಿಂದ ತೆಗೆದುಹಾಕತಕ್ಕದ್ದಲ್ಲ.

(6) ಈ ಪ್ರಕರಣದ ಅಡಿಯಲ್ಲಿ ವಿಚಾರಣೆಯನ್ನು ನಡೆಸುವ ಉದ್ದೇಶಗಳಿಗಾಗಿ ಅಧ್ಯಕ್ಷರು, ಉಚ್ಚನ್ಯಾಯಾಲಯದ ಅಥವಾ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿರುವ ಅಥವಾ ಆಗಿದ್ದ ವ್ಯಕ್ತಿಯನ್ನು ನೇಮಕ ಮಾಡತಕ್ಕದ್ದು. ವಿಚಾರಣಾ ಪ್ರಾಧಿಕಾರವು, ಕುಲಪತಿಯವರಿಗೆ ತಮ್ಮ ಮನವಿಯನ್ನು ಸಲ್ಲಿಸಲು ಅವಕಾಶವನ್ನು ಕೊಟ್ಟ ತರುವಾಯ ವಿಚಾರಣೆಯನ್ನು ನಡೆಸತಕ್ಕದ್ದು ಮತ್ತು ವಿಧಿಸಬೇಕಾದ ಯಾವುದೇ ದಂಡನೆ ಇದ್ದಲ್ಲಿ, ಅದು ಒಳಗೊಂಡಂತೆ ತೆಗೆದುಕೊಳ್ಳಬೇಕಾದ ಕ್ರಮದ ಬಗ್ಗೆ ಒಂದು ವರದಿಯನ್ನು ಅಧ್ಯಕ್ಷರಿಗೆ ಸಲ್ಲಿಸತಕ್ಕದ್ದು ಹಾಗೂ ಅಧ್ಯಕ್ಷರು, ವರದಿಯನ್ನು ಸ್ವೀಕರಿಸಿದ ದಿನಾಂಕದಿಂದ ಆರು ತಿಂಗಳುಗಳೊಳಗೆ ಕ್ರಮ ತೆಗೆದುಕೊಳ್ಳತಕ್ಕದ್ದು.

(7) ಕುಲಪತಿಯವರ ಉಪಲಬ್ಧಿಗಳು ಮತ್ತು ಇತರ ಸೇವಾ ಷರತ್ತುಗಳು, ಅಧ್ಯಕ್ಷರು ನಿರ್ಧರಿಸಬಹುದಾದಂತೆ ಇರತಕ್ಕದ್ದು ಮತ್ತು ಅವುಗಳನ್ನು ಅವರು ಕುಲಪತಿಯಾಗಿ ನೇಮಕವಾದ ತರುವಾಯ ಅವರಿಗೆ ಅನಾನುಕೂಲವಾಗುವಂತೆ ಬದಲಾಯಿಸತಕ್ಕದ್ದಲ್ಲ. ಕುಲಪತಿಯಾಗಿರುವಾಗಿನ ತಮ್ಮ ಪದಾವಧಿಯಲ್ಲಿ, ಕುಲಪತಿಯವರು, ವಯೋನಿವೃತ್ತಿಯ ಮೇಲೆ ನಿವೃತ್ತರಾಗುವ ಸಂದರ್ಭದಲ್ಲಿ ಈಗಾಗಲೇ ನಿರ್ಧರಿಸಲಾದ ಅವರ ಸೇವಾ ಷರತ್ತುಗಳು ರೂಢಿಯಲ್ಲಿರುವುದು ಮುಂದುವರೆಯತಕ್ಕದ್ದು. ಅವರ ಎಲ್ಲಾ ನಿವೃತ್ತಿ ಸೌಲಭ್ಯಗಳನ್ನು ತಡೆಹಿಡಿಯತಕ್ಕದ್ದು ಮತ್ತು ಅವರು ಕುಲಪತಿಯಾಗಿ ತಮ್ಮ ಅಧಿಕಾರ ಸ್ಥಾನವನ್ನು ತ್ಯಜಿಸಿದ (ಡೆಮಿಟಿಂಗ್) ತರುವಾಯ ಅವುಗಳನ್ನು ಬಿಡುಗಡೆ ಮಾಡತಕ್ಕದ್ದು.

(8) ಒಬ್ಬ ನಿವೃತ್ತ ವ್ಯಕ್ತಿಯನ್ನು ಕುಲಪತಿಯಾಗಿ ನೇಮಕ ಮಾಡಿದ್ದರೆ, ಅವರನ್ನು ಕುಲಪತಿಯಾಗಿ ನೇಮಕ ಮಾಡಿದ ಮೇಲೆ ಅವರ ಉಪಲಬ್ಧಿಗಳು ಒಳಗೊಂಡಂತೆ ಅವರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳನ್ನು ಅಧ್ಯಕ್ಷರು ನಿರ್ಧರಿಸತಕ್ಕದ್ದು. ಉಪಲಬ್ಧಿಗಳನ್ನು, ಕಮ್ಯೂಟೇಶನ್ ಮುಂಚಿನ, ಅವರ ನಿವ್ವಳ ನಿವೃತ್ತಿ ವೇತನದ ಒಟ್ಟು ಮೊತ್ತದಿಂದ ಕಡಿಮೆ ಮಾಡತಕ್ಕದ್ದು ಅಥವಾ ಅವರು ಹುದ್ದೆಯನ್ನು ತ್ಯಜಿಸುವವರೆಗೆ ಅವರಿಗೆ ನಿವೃತ್ತಿ ವೇತನದ ಪಾವತಿಯನ್ನು ತಡೆಹಿಡಿಯತಕ್ಕದ್ದು.

(9) ರಾಜ್ಯದಲ್ಲಿನ ಒಂದು ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಒಬ್ಬ ಪ್ರಾಧ್ಯಾಪಕರನ್ನು ಕುಲಪತಿಯಾಗಿ ನೇಮಕಮಾಡಿದ್ದರೆ, ಅವರು ಕುಲಪತಿಯಾಗಿರುವವರ ಪದಾವಧಿಯಲ್ಲಿ, ಪ್ರಾಧ್ಯಾಪಕರಾಗಿದ್ದಾಗ ಅವರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳನ್ನು ಅವರಿಗೆ ಅನಾನುಕೂಲವಾಗುವಂತೆ ಪರಿಷ್ಕರಿಸತಕ್ಕದ್ದಲ್ಲ ಹಾಗೂ ಅವರು ತಮ್ಮ ಹುದ್ದೆಯ ಧಾರಣಾಧಿಕಾರವನ್ನು ಉಳಿಸಿಕೊಳ್ಳತಕ್ಕದ್ದು.

**16. ಕುಲಪತಿಯ ಅಧಿಕಾರಗಳು.–** (1) ಕುಲಪತಿಯು, ವಿಶ್ವವಿದ್ಯಾಲಯದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಮತ್ತು ಶೈಕ್ಷಣಿಕ ವಿಷಯಗಳ ಮುಖ್ಯಸ್ಥರಾಗಿರತಕ್ಕದ್ದು ಮತ್ತು ಈ ಅಧಿನಿಯಮದಲ್ಲಿ ತಿಳಿಸಲಾದ ಏಕೀಕೃತ ಮತ್ತು ಸಂಯೋಜಿತ ಪದ್ಧತಿಗಳೆರಡರ ವ್ಯವಹಾರಗಳ ಮೇಲೆ ಸಾಮಾನ್ಯ ನಿಯಂತ್ರಣವನ್ನು ಚಲಾಯಿಸತಕ್ಕದ್ದು. ವಿಶ್ವವಿದ್ಯಾಲಯದ ಎರಡೂ ಪದ್ಧತಿಗಳಲ್ಲಿ ಶಿಸ್ತಿನ ಪರಿಪಾಲನೆಗಾಗಿ ಅವಶ್ಯವೆನಿಸುವಂಥ ಅಧಿಕಾರಗಳನ್ನು ಅವರು ಚಲಾಯಿಸತಕ್ಕದ್ದು.

(2) ಅವರು ಆಡಳಿತ ಮಂಡಳಿಯ ಪದನಿಮಿತ್ತ ಚೇರ್ಮನ್ ಆಗಿರತಕ್ಕದ್ದು. ಅವರು ಅಧ್ಯಕ್ಷರ ಗೈರುಹಾಜರಿಯಲ್ಲಿ ಘಟಿಕೋತ್ಸವದ ಅಧ್ಯಕ್ಷತೆಯನ್ನು ವಹಿಸತಕ್ಕದ್ದು. ಅದರ ಜೊತೆಗೆ, ಈ ಅಧಿನಿಯಮದಲ್ಲಿ ಉಪಬಂಧ ಕಲ್ಪಿಸಲಾದ ವಿಶ್ವವಿದ್ಯಾಲಯಗಳ ಎರಡೂ ಪದ್ಧತಿಗಳ ಪ್ರಾಧಿಕಾರಗಳು ಅಥವಾ ನಿಕಾಯಗಳ ಸಭೆಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಮತ ಹಾಕಲು ಹಕ್ಕುಳ್ಳವರಾಗಿರತಕ್ಕದ್ದು.

(3) ಈ ಅಧಿನಿಯಮದ, ಶಾಸನಗಳ, ವಿನಿಯಮಗಳ ಮತ್ತು ನಿಯಮಗಳ ಎಲ್ಲಾ ಉಪಬಂಧಗಳನ್ನು ಪಾಲಿಸಲಾಗುತ್ತಿದೆಯೇ ಎಂಬುದನ್ನು ಅವರು ಖಚಿತಪಡಿಸಿಕೊಳ್ಳತಕ್ಕದ್ದು ಮತ್ತು ಆ ಉದ್ದೇಶಕ್ಕಾಗಿ ಅವಶ್ಯವಾದ ಎಲ್ಲಾ ಅಧಿಕಾರಗಳನ್ನು ಹೊಂದಿರತಕ್ಕದ್ದು.

(4) ಕುಲಪತಿಯವರು, ತ್ವರಿತ ಕ್ರಮ ಅಗತ್ಯವೆಂದು ಅವರು ಅಭಿಪ್ರಾಯಪಡುವ ಯಾವುದೇ ತುರ್ತು ಸಂದರ್ಭದಲ್ಲಿ, ಅವರು ಅವಶ್ಯವೆಂದು ಭಾವಿಸುವಂಥ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು ಮತ್ತು ಆ ತರುವಾಯ ಅತಿ ಶೀಘ್ರವಾಗಿ ಕೈಗೊಂಡ ಕ್ರಮದ ಬಗ್ಗೆ, ಸಾಮಾನ್ಯ ಕ್ರಮದಲ್ಲಿ ಆ ವಿಷಯದ ಬಗ್ಗೆ ವ್ಯವಹರಿಸಬಹುದಾಗಿದ್ದ ಪ್ರಾಧಿಕಾರಕ್ಕೆ ಅಥವಾ ನಿಕಾಯಕ್ಕೆ ವರದಿ ಮಾಡತಕ್ಕದ್ದು:

ಪರಂತು, ಕುಲಪತಿಯವರು ತೆಗೆದುಕೊಂಡ ಕ್ರಮವನ್ನು ಸಂಬಂಧಪಟ್ಟ ಪ್ರಾಧಿಕಾರ ಅಥವಾ ನಿಕಾಯವು ಅನುಮೋದಿಸದಿದ್ದರೆ, ಅವರು ಆ ವಿಷಯವನ್ನು ಅಧ್ಯಕ್ಷರಿಗೆ ಉಲ್ಲೇಖಿಸಬಹುದು, ಆ ಬಗ್ಗೆ ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು:

ಮತ್ತು ಪರಂತು, ಈ ಉಪಪ್ರಕರಣದ ಅಡಿಯಲ್ಲಿ ಕುಲಪತಿಯವರ ವರದಿಯ ಆಧಾರದ ಮೇಲೆ ಪ್ರಾಧಿಕಾರ ಅಥವಾ ನಿಕಾಯವು ತೆಗೆದುಕೊಂಡ ತೀರ್ಮಾನದಿಂದ ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಯಾವೊಬ್ಬ ವ್ಯಕ್ತಿಯು ಬಾಧಿತನಾದರೆ, ಆ ವ್ಯಕ್ತಿಯು ಅವನಿಗೆ ತೀರ್ಮಾನವನ್ನು ತಿಳಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಅಧ್ಯಕ್ಷರ ಮುಂದೆ ಅಪೀಲು ಸಲ್ಲಿಸಬಹುದು ಮತ್ತು ಅಂಥ ಅಪೀಲಿನ ಮೇಲೆ ಅಧ್ಯಕ್ಷರ ತೀರ್ಮಾನವು ಅಂತಿಮವಾಗಿರತಕ್ಕದ್ದು:

ಮತ್ತೂ ಪರಂತು, ಈ ಉಪಪ್ರಕರಣದ ಅಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ವಿಶ್ವವಿದ್ಯಾಲಯದ ನೌಕರರ ವೇತನ ಶ್ರೇಣಿಯನ್ನು ಪರಿಷ್ಕರಿಸಲು ಅಥವಾ ಕಾಲೇಜಿಗೆ ಅಥವಾ ಬೋಧನಾ ವ್ಯಾಸಂಗ ಕ್ರಮಕ್ಕೆ, ಸಂಯೋಜನೆ ನೀಡುವುದಕ್ಕಾಗಿ ಚಲಾಯಿಸತಕ್ಕದ್ದಲ್ಲ ಮತ್ತು ಈ ಉಪ ಪ್ರಕರಣದ, ಶಾಸನಗಳ ಅಥವಾ ವಿನಿಯಮಗಳ ಅಡಿಯಲ್ಲಿಯ ಅಧಿಕಾರಗಳನ್ನು ಚಲಾಯಿಸುವುದು ಈ ಅಧಿನಿಯಮದಲ್ಲಿಯ ಸಂಬಂಧಪಟ್ಟ ಉಪಬಂಧಗಳ ಅಡಿಯಲ್ಲಿ ಅಧ್ಯಕ್ಷರ ಅನುಮೋದನೆಗೆ ಒಳಪಟ್ಟಿರತಕ್ಕದ್ದು.

(5) ಕುಲಪತಿಯವರು ಶಾಸನಗಳು, ನಿಯಮಗಳು ಮತ್ತು ವಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

**17. ಕುಲಪತಿಯವರ ಹುದ್ದೆಯು ಖಾಲಿ ಇರುವ ಅವಧಿಯಲ್ಲಿ ಕಾರ್ಯ ವ್ಯವಸ್ಥೆ.–** (1) ರಜೆ, ಅನಾರೋಗ್ಯ ಅಥವಾ ಇತರ ಯಾವುದೇ ಕಾರಣದಿಂದಾಗಿ ಕುಲಪತಿಯವರ ತಾತ್ಕಾಲಿಕ ಗೈರುಹಾಜರಿಯ ಅವಧಿಯಲ್ಲಿ, ಅಧ್ಯಕ್ಷರು, ಕುಲಪತಿಯವರ ಕರ್ತವ್ಯಗಳನ್ನು ನಿರ್ವಹಿಸುವುದಕ್ಕಾಗಿ ತಾನು ಸೂಕ್ತವೆಂದು ಭಾವಿಸುವಂಥ ವ್ಯವಸ್ಥೆಗಳನ್ನು ಮಾಡಬಹುದು:

ಪರಂತು, ಅಧ್ಯಕ್ಷರು ಅಂಥ ವ್ಯವಸ್ಥೆಗಳನ್ನು ಮಾಡುವವರೆಗೆ, ಕುಲಪತಿಯವರು, ಜ್ಯೇಷ್ಠತಮ ಸಹಕುಲಪತಿಯವರನ್ನು ಒಂದು ತಿಂಗಳಿಗಿಂತ ಹೆಚ್ಚಿಲ್ಲದ ಅವಧಿಗೆ ಅಥವಾ ಅಧ್ಯಕ್ಷರು ಅಂಥ ವ್ಯವಸ್ಥೆಗಳನ್ನು ಮಾಡುವವರೆಗೆ, ಇವುಗಳಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ಕುಲಪತಿಯವರ ಪ್ರಸಕ್ತ ಕರ್ತವ್ಯಗಳ ಪ್ರಭಾರದಲ್ಲಿರಿಸಲು ಪದನಾಮೀಕರಿಸಬಹುದು.

(2) ಕುಲಪತಿಯವರ ಸ್ಥಾನವು ಭರ್ತಿಯಾಗದೆ ಖಾಲಿ ಉಳಿದಿರುವ ಅವಧಿಯಲ್ಲಿ, ಅಧ್ಯಕ್ಷರು ನೇಮಕ ಮಾಡಬಹುದಾದ ಜ್ಯೇಷ್ಠತಮ ಸಹಕುಲಪತಿಯವರು, ಕುಲಪತಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು ಮತ್ತು ಹಾಗೆ ನೇಮಕಗೊಂಡ ವ್ಯಕ್ತಿಯು, ಕುಲಪತಿಯವರ ಎಲ್ಲಾ ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಎಲ್ಲಾ ವಿಶೇಷಾಧಿಕಾರಗಳಿಗೂ ಮತ್ತು ಅಧ್ಯಕ್ಷರು ನಿರ್ಧರಿಸಬಹುದಾದಂಥ ಉಪಲಬ್ಧಿಗಳಿಗೂ ಮತ್ತು ಭತ್ಯೆಗಳಿಗೂ ಹಕ್ಕುಳ್ಳವನಾಗಿರತಕ್ಕದ್ದು.

**18. ಕುಲಸಚಿವರು.–** (1) ಕುಲಸಚಿವರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು.

(2) ಪ್ರಬಂಧಕ ಮಂಡಳಿಯಿಂದ ಕುಲಸಚಿವರಾಗಿ ನೇಮಕಗೊಳ್ಳುವುದಕ್ಕಾಗಿ, ಐದು ವರ್ಷಗಳ ಅನುಭವವುಳ್ಳ ಪ್ರಾಧ್ಯಾಪಕರ ಅಥವಾ ಉನ್ನತಕಾಲಿಕ ಶ್ರೇಣಿಯಲ್ಲಿನ (ಸೂಪರ್‌ಟೈಮ್ ಸ್ಕೇಲ್) ಸರ್ಕಾರದ ಗ್ರೂಪ್–ಎ ಅಧಿಕಾರಿಗಳ ಪೈಕಿಯಿಂದ ಮೂರು ಹೆಸರುಗಳನ್ನುಳ್ಳ ಪಟ್ಟಿಯನ್ನು ಕುಲಪತಿಯವರು ಪ್ರಸ್ತಾವಿಸತಕ್ಕದ್ದು.

(3) ಕುಲಸಚಿವರು, ಈ ಅಧಿನಿಯಮದ ಅಡಿಯಲ್ಲಿ ಸ್ಥಾಪಿತವಾದ ಮತ್ತು ಅದರಲ್ಲಿ ನಿರ್ದಿಷ್ಟಪಡಿಸಲಾದ, ವಿವಿಧ ಪ್ರಾಧಿಕಾರಗಳ ಕಾರ್ಯದರ್ಶಿ ಅಥವಾ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(4) ಈ ಮುಂದಿನವುಗಳು ಕುಲಸಚಿವರ ಕರ್ತವ್ಯವಾಗಿರತಕ್ಕದ್ದು,–

(i) ಕುಲಪತಿಯವರು ಅಥವಾ ಪ್ರಬಂಧಕ ಮಂಡಳಿಯು ತನ್ನ ವಶಕ್ಕೆ ಒಪ್ಪಿಸಿರತಕ್ಕ ವಿಶ್ವವಿದ್ಯಾಲಯದ ದಾಖಲೆಗಳು, ಸಾಮಾನ್ಯ ಮೊಹರು ಮತ್ತು ಅಂಥ ಇತರ ಸ್ವತ್ತಿನ ಅಭಿರಕ್ಷಕನಾಗಿರತಕ್ಕದ್ದು;

(ii) ಅಧಿನಿಯಮದಲ್ಲಿ ಅಥವಾ ಶಾಸನಗಳಲ್ಲಿ ನಿಯಮಿಸಲಾದ, ವಿಶ್ವವಿದ್ಯಾಲಯದ ವಿವಿಧ ಪ್ರಾಧಿಕಾರಗಳ ಸಭೆಗಳನ್ನು ಕರೆಯುವ ನೋಟೀಸುಗಳನ್ನು ಹೊರಡಿಸುವುದು ಮತ್ತು ಅಂಥ ಎಲ್ಲಾ ಸಭೆಗಳ ನಡೆವಳಿಗಳನ್ನು ಇಡುವುದು ಮತ್ತು ಈ ಪ್ರಾಧಿಕಾರಗಳ ನಿರ್ಧಾರಗಳನ್ನು ನಿರ್ವಹಿಸಲು ಮತ್ತು ಜಾರಿಗೆ ತರಲು ಅವಶ್ಯಕವಾಗಬಹುದಾದಂಥ ಎಲ್ಲಾ ಕಾರ್ಯಗಳನ್ನು ನೆರವೇರಿಸತಕ್ಕದ್ದು;

(iii) ಆತನು ಕಾರ್ಯದರ್ಶಿಯಾಗಿರತಕ್ಕ ಪ್ರಾಧಿಕಾರಗಳ ಅಧಿಕೃತ ಪತ್ರವ್ಯವಹಾರವನ್ನು ನಡೆಸತಕ್ಕದ್ದು;

(iv) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಸಭೆಗಳ ಕಾರ್ಯಸೂಚಿಯ ಪ್ರತಿಗಳನ್ನು, ಅವುಗಳನ್ನು ಹೊರಡಿಸಿದ ಕೂಡಲೇ ಹಾಗೂ ಸಭೆಗಳನ್ನು ನಡೆಸಿದ ತಿಂಗಳೊಳಗಾಗಿ ಅವುಗಳ ನಡೆವಳಿಗಳನ್ನು ಅಧ್ಯಕ್ಷರಿಗೆ ಸಲ್ಲಿಸುವುದು;

(v) ವಿಶ್ವವಿದ್ಯಾಲಯದ ಎಲ್ಲಾ ಅಧಿಕಾರಿಗಳು ಮತ್ತು ಪ್ರಾಧಿಕಾರಗಳಿಗೆ ಅವಶ್ಯವಾದ ಆಡಳಿತಾತ್ಮಕ ಪದ್ಧತಿಗಳು ಮತ್ತು ಬೆಂಬಲವನ್ನು ಒದಗಿಸುವುದು.

(5) ಕುಲಸಚಿವರು ಶಾಸನಗಳು, ವಿನಿಯಮಗಳು ಅಥವಾ ನಿಯಮಗಳ ಮೂಲಕ ನಿಯಮಿಸಬಹುದಾದ ಮತ್ತು ಕುಲಪತಿಯವರು ಕಾಲಕಾಲಕ್ಕೆ ಹಂಚಿಕೆ ಮಾಡಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(6) ಕುಲಸಚಿವರ ಉಪಲಬ್ಧಿಗಳು ಮತ್ತು ಆತನ ಷರತ್ತುಗಳ ನಿಬಂಧನೆಗಳು, ಶಾಸನಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

(7) ಕುಲಸಚಿವರು ಒಬ್ಬರು ಅಥವಾ ಹೆಚ್ಚಿನ ಉಪಕುಲಸಚಿವರಿಂದ ಮತ್ತು ಸಹಾಯಕ ಕುಲಸಚಿವರಿಂದ ನೆರವು ಪಡೆಯಬಹುದು.

**19. ಹಣಕಾಸು ಅಧಿಕಾರಿ.–** (1) ಕನಿಷ್ಠ ಹತ್ತು ವರ್ಷಗಳ ಅನುಭವವುಳ್ಳ ಚಾರ್ಟರ್ಡ್ ಅಕೌಂಟೆಂಟ್ ಅಥವಾ ಕರ್ನಾಟಕ ಮಹಾಲೇಖಪಾಲರ ಕಚೇರಿಯಿಂದ ಉಪಮಹಾಲೇಖಪಾಲ ದರ್ಜೆಯ ಒಬ್ಬರು ಅಧಿಕಾರಿಯನ್ನು ಅಥವಾ ರಾಜ್ಯ ಲೆಕ್ಕಪತ್ರ ನಿಯಂತ್ರಕರ ಇಲಾಖೆಯಲ್ಲಿ ಜಂಟಿ ನಿಯಂತ್ರಕ ಕೇಡರ್‌ನಲ್ಲಿನ ಅಧಿಕಾರಿಯನ್ನು, ಹಣಕಾಸು ಅಧಿಕಾರಿಯಾಗಿ ನೇಮಕ ಮಾಡತಕ್ಕದ್ದು. ಆತನು, ಕುಲಪತಿಯವರ ಶಿಫಾರಸ್ಸಿನ ಮೇರೆಗೆ ಪ್ರಬಂಧಕ ಮಂಡಳಿಯಿಂದ ನೇಮಕವಾದ ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು.

(2) ಹಣಕಾಸು ಅಧಿಕಾರಿಯ ನೇಮಕದ ಅವಧಿ ಮತ್ತು ಅವರ ಉಪಲಬ್ಧಿಗಳು ಹಾಗೂ ಇತರ ನಿಬಂಧನೆಗಳು ಮತ್ತು ಷರತ್ತುಗಳು ಪ್ರಬಂಧಕ ಮಂಡಳಿಯು ನಿರ್ಧರಿಸುವಂಥವುಗಳಾಗಿರತಕ್ಕದ್ದು.

(3) ಹಣಕಾಸು ಅಧಿಕಾರಿಯು, ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತಿನ ಪದನಿಮಿತ್ತ ಸದಸ್ಯ ಕಾರ್ಯದರ್ಶಿ ಆಗಿರತಕ್ಕದ್ದು ಮತ್ತು ಅದರ ನಿಯತಕಾಲಿಕ ಸಭೆಗಳು ಮತ್ತು ಅದರಲ್ಲಿ ತೆಗೆದುಕೊಂಡ ನಿರ್ಧಾರಗಳ ಅನುಷ್ಠಾನಕ್ಕೆ ಹೊಣೆಗಾರನಾಗಿರತಕ್ಕದ್ದು.

(4) ಹಣಕಾಸು ಅಧಿಕಾರಿಯು, ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತಿನ ನಿಯಂತ್ರಣಕ್ಕೊಳಪಟ್ಟು ಶಾಸನಗಳು ಮತ್ತು ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**20. ಕುಲಸಚಿವರ, ಹಣಕಾಸು ಅಧಿಕಾರಿಯ ಹುದ್ದೆಯಲ್ಲಿ ತಾತ್ಕಾಲಿಕ ಖಾಲಿ ಸ್ಥಾನ.–** (1) ಕುಲಸಚಿವರ ಅಥವಾ ಹಣಕಾಸು ಅಧಿಕಾರಿಯ ಮರಣ, ಅಮಾನತ್ತು ಅಥವಾ ತಾತ್ಕಾಲಿಕ ಗೈರುಹಾಜರಿಯ ಸಂದರ್ಭದಲ್ಲಿ, ಕುಲಪತಿಯವರು ತಮ್ಮ ವಿವೇಚನಾನುಸಾರವಾಗಿ, ಕ್ರಮಬದ್ಧವಾದ ನೇಮಕಾತಿಯನ್ನು ಮಾಡುವವರೆಗೆ, ಕುಲಸಚಿವರ ಅಥವಾ ಸಂದರ್ಭಾನುಸಾರ ಹಣಕಾಸು ಅಧಿಕಾರಿಯ ಕರ್ತವ್ಯಗಳನ್ನು ನಿರ್ವಹಿಸಲು, ವಿಶ್ವವಿದ್ಯಾಲಯದ ಯಾವೊಬ್ಬ ಇತರ ಸೂಕ್ತ ಅಧಿಕಾರಿಯನ್ನು ಅಧಿಕೃತಗೊಳಿಸಬಹುದು.

(2) ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿ ಮತ್ತು ಸಂಯೋಜನಾ ಪದ್ಧತಿಯ ಇತರ ಅಧಿಕಾರಿಗಳ ನೇಮಕಾತಿ ವಿಧಾನ, ಅಧಿಕಾರಗಳು ಮತ್ತು ಪ್ರಕಾರ್ಯಗಳು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದಂತೆ ಇರತಕ್ಕದ್ದು.

## ಅಧ್ಯಾಯ – *IV*

## ವಿಶ್ವವಿದ್ಯಾಲಯದ ಪ್ರಾಧಿಕಾರಗಳು

**21. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಈ ಮುಂದಿನಂತೆ ಇರತಕ್ಕದ್ದು.–**

(1) **ಸಾಮಾನ್ಯ:**

(ಎ) ಪ್ರಬಂಧಕ ಮಂಡಳಿ;

(ಬಿ) ಓಂಬುಡ್ಸ್‌ಮನ್;

(ಸಿ) ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತು;

(ಡಿ) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಶಾಸನಗಳ ಮೂಲಕ ಅಧಿಸೂಚಿಸಬಹುದಾದಂತೆ ಅಂಥ ಇತರ ಪ್ರಾಧಿಕಾರಗಳು.

**(2) ಏಕೀಕೃತ ಪದ್ಧತಿ:**

(ಎ) ವಿದ್ಯಾವಿಷಯಕ ಪರಿಷತ್ತು;

(ಬಿ) ಸಂಶೋಧನೆ ಮತ್ತು ಅನ್ವೇಷಣಾ ಪರಿಷತ್ತು;

(ಸಿ) ನೇಮಕಾತಿ ಮಂಡಳಿ;

(ಡಿ) ವ್ಯಾಸಂಗ ವಿಭಾಗ (ಫ್ಯಾಕಲ್ಟಿ) ಪರಿಷತ್ತು;

(ಇ) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಶಾಸನಗಳ ಮೂಲಕ ಅಧಿಸೂಚಿಸಬಹುದಾದಂತೆ ಅಂಥ ಇತರ ಪ್ರಾಧಿಕಾರಗಳು.

**(3) ಸಂಯೋಜನಾ ಪದ್ಧತಿ:**

(ಎ) ವ್ಯವಸ್ಥಾಪನಾ ಪರಿಷತ್ತು;

(ಬಿ) ಸಂಯೋಜನಾ ಮತ್ತು ಪರೀಕ್ಷಾ ಮಂಡಳಿ;

(ಸಿ) ಮುಕ್ತ ಮತ್ತು ದೂರ ಶಿಕ್ಷಣ ಮಂಡಳಿ;

(ಡಿ) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಶಾಸನಗಳ ಮೂಲಕ ಅಧಿಸೂಚಿಸಬಹುದಾದಂತೆ ಅಂಥ ಇತರ ಪ್ರಾಧಿಕಾರಗಳು.

**22. ಪ್ರಬಂಧಕ ಮಂಡಳಿ.–** (1) ಅಧ್ಯಕ್ಷರು ಕುಲಪತಿಯವರೊಂದಿಗೆ ಸಮಾಲೋಚಿಸಿ ಈ ಮುಂದಿನ ಸದಸ್ಯರುಗಳನ್ನೊಳಗೊಂಡ ಪ್ರಬಂಧಕ ಮಂಡಳಿಯನ್ನು ರಚಿಸತಕ್ಕದ್ದು ಎಂದರೆ:–

(i) ಕುಲಪತಿ – ಪದನಿಮಿತ್ತ ಚೇರ್ಮನ್;

(ii) ಪ್ರಧಾನ ಕಾರ್ಯದರ್ಶಿ ಉನ್ನತ ಶಿಕ್ಷಣ ಇಲಾಖೆ – ಪದನಿಮಿತ್ತ ಸದಸ್ಯ;

(iii) ಕಾರ್ಯನಿರ್ವಾಹಕ ನಿರ್ದೇಶಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತು – ಪದನಿಮಿತ್ತ ಸದಸ್ಯ;

(iv) ಸಹ ಕುಲಪತಿ ಏಕೀಕೃತ ಪದ್ಧತಿ – ಪದನಿಮಿತ್ತ ಸದಸ್ಯ;

(v) ಸಹ ಕುಲಪತಿ ಸಂಯೋಜನಾ ಪದ್ಧತಿ – ಪದನಿಮಿತ್ತ ಸದಸ್ಯ;

(vi) ಸರತಿಯ ಮೇಲೆ, ಎರಡು ವರ್ಷಗಳ ಅವಧಿಗಾಗಿ ಅಧ್ಯಕ್ಷರು ನಾಮನಿರ್ದೇಶಿಸಬೇಕಾದ ವಿಶ್ವವಿದ್ಯಾಲಯದ ವಿದ್ಯಾವಿಷಯಗಳಿಗೆ (academia) ಸೇರಿದ ಈ ಮುಂದಿನ ಐವರು ಸದಸ್ಯರು;

(ಎ) ಒಬ್ಬರು ಜ್ಯೇಷ್ಠತಮ ಡೀನ್;

(ಬಿ) ಏಕೀಕೃತ ಪದ್ಧತಿಯಿಂದ, ಅಧ್ಯಕ್ಷರು ನಾಮನಿರ್ದೇಶಿಸಿದ ಇಬ್ಬರು ಜ್ಯೇಷ್ಠತಮ ಪ್ರಾಧ್ಯಾಪಕರು;

(ಸಿ) ಸಂಯೋಜನಾ ಪದ್ಧತಿಯಿಂದ, ಅಧ್ಯಕ್ಷರು ನಾಮನಿರ್ದೇಶಿಸಿದ ಇಬ್ಬರು ಪ್ರಾಂಶುಪಾಲರು;

(vii) ಮೂರು ವರ್ಷಗಳ ಅವಧಿಗಾಗಿ, ಸರ್ಕಾರವು ನಾಮನಿರ್ದೇಶಿಸಿದ, ಪ್ರಖ್ಯಾತ ಶಿಕ್ಷಣ ತಜ್ಞರಾದ ಮೂವರು ಸದಸ್ಯರು, ಅವರಲ್ಲಿ ಒಬ್ಬರು ಅನುಸೂಚಿತ ಜಾತಿಗಳಿಗೆ ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದವರಾಗಿರತಕ್ಕದ್ದು, ಒಬ್ಬರು ಇತರ ಹಿಂದುಳಿದ ವರ್ಗಗಳಿಗೆ ಸೇರಿದವರಾಗಿರತಕ್ಕದ್ದು'

(viii) ಮೂರು ವರ್ಷಗಳ ಅವಧಿಗಾಗಿ ಅಧ್ಯಕ್ಷರು ನಾಮನಿರ್ದೇಶಿಸಿದ ಇಬ್ಬರು ಸದಸ್ಯರು, ಅವರಲ್ಲಿ ಒಬ್ಬರು ಪ್ರಮುಖ ಕೈಗಾರಿಕೋದ್ಯಮಿಯಾಗಿರತಕ್ಕದ್ದು, ಮತ್ತೊಬ್ಬರು ಸಂಶೋಧನೆಯಲ್ಲಿ ಪ್ರತಿಷ್ಠಿತ ವ್ಯಕ್ತಿತ್ವವುಳ್ಳವರಾಗಿರತಕ್ಕದ್ದು;

(ix) ಕುಲಸಚಿವರು ಸಂಚಾಲಕ – ಕಾರ್ಯದರ್ಶಿಯಾಗಿರತಕ್ಕದ್ದು.

**23. ಪ್ರಬಂಧಕ ಮಂಡಳಿಯ ಅಧಿಕಾರಗಳು.–** (1) ಮಂಡಳಿಯು, ವಿಶ್ವವಿದ್ಯಾಲಯದ ಆಡಳಿತ, ಹಣಕಾಸು ಮತ್ತು ಸ್ವತ್ತುಗಳು ಒಳಗೊಂಡಂತೆ ವಿಶ್ವವಿದ್ಯಾಲಯದ ವ್ಯವಹಾರಗಳನ್ನು ನಿರ್ವಹಿಸುವುದಕ್ಕಾಗಿ, ಅಧಿಕಾರವನ್ನು ಹೊಂದಿರತಕ್ಕದ್ದು.

(2) ಮೇಲಿನ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ, ಪ್ರಬಂಧಕ ಮಂಡಳಿಯು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಹಣಕಾಸು ಮತ್ತು ಇತರ ಎಲ್ಲಾ ಆಡಳಿತಾತ್ಮಕ ವಿಷಯಗಳನ್ನು ನಿರ್ವಹಿಸುವುದು ಮತ್ತು ನಿಯಂತ್ರಿಸುವುದು, ಆ ಉದ್ದೇಶಕ್ಕಾಗಿ ಅದು ಅವಶ್ಯ ಮತ್ತು ಯುಕ್ತವೆಂದು ಭಾವಿಸಬಹುದಾದಂಥ ಏಜೆಂಟರುಗಳನ್ನು ಅಥವಾ ಪ್ರತಿನಿಧಿಗಳನ್ನು ನೇಮಿಸಿಕೊಳ್ಳುವುದು;

(ii) ವಿಶ್ವವಿದ್ಯಾಲಯದ ಮಂಡಳಿಯ ಕಾರ್ಯನೀತಿಗಳು ಮತ್ತು ಕಾರ್ಯಕ್ರಮಗಳನ್ನು ಕಾಲಕಾಲಕ್ಕೆ ಪುನರವಲೋಕಿಸುವುದು ಮತ್ತು ಮೆರಿಟ್‌ನ್ನು ಸುಧಾರಿಸುವುದಕ್ಕಾಗಿ ಹಾಗೂ ವಿಶ್ವವಿದ್ಯಾಲಯದ ಅಭಿವೃದ್ಧಿಗಾಗಿ ಕ್ರಮಗಳ ಬಗ್ಗೆ ಸಲಹೆ ನೀಡುವುದು;

(iii) ತನ್ನ ಪ್ರತಿನಿಧಿಗಳ ಮೂಲಕ ವಿಶ್ವವಿದ್ಯಾಲಯದ ಪರವಾಗಿ ಕರಾರುಗಳನ್ನು ಮಾಡಿಕೊಳ್ಳುವುದು, ವ್ಯತ್ಯಾಸಗೊಳಿಸುವುದು, ಕೈಗೊಳ್ಳುವುದು ಅಥವಾ ರದ್ದುಗೊಳಿಸುವುದು;

(iv) ನೇಮಕಾತಿ ಮಂಡಳಿಯ, ಅಧ್ಯಯನ ಶಾಲೆಗಳ ಮತ್ತು ಇಲಾಖೆಗಳ, ಸಂಯೋಜನಾ ಮತ್ತು ಪರೀಕ್ಷಾ ಮಂಡಳಿಯ ಸದಸ್ಯರ ಮತ್ತು ಅಂಥ ಇತರ ಪ್ರಾಧಿಕಾರಗಳ ಸದಸ್ಯರ ಶುಲ್ಕಗಳು ಮತ್ತು ಉಪಲಬ್ಧಿಗಳು ಮತ್ತು ಪ್ರಯಾಣ ಭತ್ಯೆಗಳು ಹಾಗೂ ಇತರ ಭತ್ಯೆಗಳನ್ನು ನಿಗದಿಪಡಿಸುವುದು;

(v) ಶಾಸನಗಳು, ವಿನಿಯಮಗಳು ಮತ್ತು ನಿಯಮಗಳಲ್ಲಿ ನಿಯಮಿಸಿರಬಹುದಾದಂತೆ ಮೌಲ್ಯಮಾಪನ ಪ್ರಕ್ರಿಯೆಯನ್ನು ನಿರ್ವಹಿಸುವುದಕ್ಕೆ ಮತ್ತು ಪರೀಕ್ಷೆಗಳನ್ನು ನಡೆಸುವುದಕ್ಕೆ ವ್ಯವಸ್ಥೆಗಳನ್ನು ಮಾಡುವುದು;

(vi) ವಿಶ್ವವಿದ್ಯಾಲಯದ, ಚರ ಮತ್ತು ಸ್ಥಿರ, ಸ್ವತ್ತುಗಳೆರಡನ್ನು ಸ್ವೀಕರಿಸುವುದು, ಆರ್ಜಿಸುವುದು, ಹೊಂದುವುದು, ನಿಯಂತ್ರಿಸುವುದು ಮತ್ತು ಆಡಳಿತ ನಡೆಸುವುದು ಹಾಗೂ ವಿಶ್ವವಿದ್ಯಾಲಯದ ನಿಧಿಗಳನ್ನು ನ್ಯಾಯೋಚಿತವಾದ ಸೂಕ್ತ ಸ್ಕೀಮುಗಳಲ್ಲಿ ತೊಡಗಿಸುವುದು;

(vii) ವಿಶ್ವವಿದ್ಯಾಲಯದ ಸ್ವತ್ತುಗಳನ್ನು ಮತ್ತು ನಿಧಿಗಳ ಲೆಕ್ಕಪತ್ರಗಳನ್ನು ನಿರ್ವಹಿಸುವಂತೆ ಮಾಡುವುದು;

(viii) ಈ ಮುಂದಿನವುಗಳಿಗಾಗಿ ಶುಲ್ಕಗಳನ್ನು ವಿಧಿಸುವುದು ಮತ್ತು ಸಂಗ್ರಹಿಸುವುದು,–

(ಎ) ಟ್ಯೂಷನ್ ಮತ್ತು ಸಂಶೋಧನೆಗಾಗಿ;

(ಬಿ) ಪರೀಕ್ಷೆ ಮತ್ತು ಘಟಿಕೋತ್ಸವಗಳಿಗೆ ಪ್ರವೇಶಕ್ಕಾಗಿ;

(ಸಿ) ವಿಶ್ವವಿದ್ಯಾಲಯವು ಕೈಗೊಳ್ಳಬಹುದಾದಂಥ ಇತರ ಸೇವೆಗಳಿಗಾಗಿ;

(ಡಿ) ಕಾಲೇಜುಗಳ, ಸ್ವಾಯತ್ತ ಮತ್ತು ಮಾನ್ಯತೆ ಪಡೆದ ಸಂಸ್ಥೆಗಳ ಅಥವಾ ಕೇಂದ್ರಗಳ ಸಂಯೋಜನೆ ಮತ್ತು ಪರಿವೀಕ್ಷಣೆಗಾಗಿ;

(ಇ) ಶಾಸನಗಳ ಮೂಲಕ ನಿಯಮಿಸಬಹುದಾದಂಥ ಇತರ ಉದ್ದೇಶಗಳಿಗಾಗಿ;

(ix) ವಾರ್ಷಿಕ ವರದಿ, ಹಣಕಾಸುಗಳ ಅಂದಾಜುಗಳು ಮತ್ತು ಅಂಥ ಲೆಕ್ಕಗಳ ಮೇಲಿನ ಲೆಕ್ಕಪರಿಶೋಧನಾ ವರದಿಗಳ ಗೊತ್ತುವಳಿಯನ್ನು ಪರಿಗಣಿಸುವುದು ಮತ್ತು ಅಂಗೀಕರಿಸುವುದು;

(x) ವಿಶ್ವವಿದ್ಯಾಲಯವು ಸ್ಥಾಪಿಸಿರುವ ಅಥವಾ ನಿರ್ವಹಿಸುತ್ತಿರುವ ಕಾಲೇಜುಗಳು, ವಿದ್ಯಾರ್ಥಿನಿಲಯಗಳು, ಗ್ರಂಥಾಲಯಗಳು, ಪ್ರಯೋಗಾಲಯಗಳು, ವಸ್ತು ಸಂಗ್ರಹಾಲಯಗಳು ಮತ್ತು ಅಂಥ ಇತರ ಸಂಸ್ಥೆಗಳ ಆಡಳಿತ ನಡೆಸುವುದು ಮತ್ತು ಸೌಲಭ್ಯ ಕಲ್ಪಿಸುವುದು;

(xi) ಸಂಯೋಜನೆಗಾಗಿ ಕಾಲೇಜುಗಳ ಪ್ರವೇಶದ ಬಗ್ಗೆ ಶಿಫಾರಸ್ಸುಗಳನ್ನು ಮಾಡುವುದು;

(xii) ವಿಶ್ವವಿದ್ಯಾಲಯದಿಂದ ಆಡಳಿತಕ್ಕೊಳಪಡದಿರುವ ವಿದ್ಯಾರ್ಥಿನಿಲಯಗಳಿಗೆ ಮಾನ್ಯತೆ ನೀಡುವುದು ಮತ್ತು ಅಂಥ ಮಾನ್ಯತೆಯನ್ನು ಅಮಾನತ್ತುಗೊಳಿಸುವುದು ಅಥವಾ ರದ್ದುಗೊಳಿಸುವುದು;

(xiii) ಕ್ಯಾಂಪಸ್ ಮತ್ತು ಅದರ ಸುತ್ತಮುತ್ತಲಿನಲ್ಲಿರುವ, ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಿವಾಸಗಳ ಸ್ಥಳಗಳನ್ನು ಕ್ರಮಬದ್ಧಗೊಳಿಸುವುದು, ಮೇಲ್ವಿಚಾರಣೆ ಮಾಡುವುದು ಮತ್ತು ಶಿಸ್ತನ್ನು ನಿಯಂತ್ರಿಸುವುದು ಮತ್ತು ಅವರ ಆರೋಗ್ಯ ಮತ್ತು ಯೋಗಕ್ಷೇಮಕ್ಕೆ ಪ್ರೋತ್ಸಾಹಿಸುವುದು;

(xiv) ಶಾಸನಗಳ ಮೂಲಕ ನಿಯಮಿಸಬಹುದಾದಂತೆ ಕುಲಪತಿಯವರಿಗೆ ಅಥವಾ ಯಾವೊಬ್ಬ ಇತರ ವ್ಯಕ್ತಿಗೆ ತನ್ನ ಅಂಥ ಕರ್ತವ್ಯಗಳನ್ನು ಪ್ರತ್ಯಾಯೋಜಿಸುವುದು;

(xv) ವಿಶ್ವವಿದ್ಯಾಲಯದ ಸಾಮಾನ್ಯ ಮೊಹರನ್ನು ಆಯ್ಕೆ ಮಾಡುವುದು ಮತ್ತು ಅದರ ಅಭಿರಕ್ಷೆ ಮತ್ತು ಬಳಕೆಗಾಗಿ ಉಪಬಂಧ ಕಲ್ಪಿಸುವುದು;

(xvi) ವಿಶ್ವವಿದ್ಯಾಲಯದಿಂದ ಅಥವಾ ಅದರ ವಿರುದ್ಧ ಕಾನೂನು ವ್ಯವಹರಣೆಗಳನ್ನು ನಡೆಸುವುದಕ್ಕೆ ವ್ಯವಸ್ಥೆ ಮಾಡುವುದು;

(xvii) ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತಿನ ಅಭಿಪ್ರಾಯವನ್ನು ಪರಿಗಣಿಸಿದ ತರುವಾಯ ವಿದ್ಯಾವಿಷಯಕ ಪರಿಷತ್ತು ಅಥವಾ ಸಂದರ್ಭಾನುಸಾರ ವ್ಯವಸ್ಥಾಪನಾ ಪರಿಷತ್ತಿನ ಶಿಫಾರಸ್ಸಿನ ಮೇರೆಗೆ ವಿಶ್ವವಿದ್ಯಾಲಯವು ಅಗತ್ಯಪಡಿಸಿದ ಪ್ರಾಧ್ಯಾಪಕರ, ಸಹಪ್ರಾಧ್ಯಾಪಕರ, ಸಹಾಯಕ ಪ್ರಾಧ್ಯಾಪಕರ ಅಥವಾ ಅಧ್ಯಾಪಕರ ಇತರ ಯಾವುದೇ ಹುದ್ದೆಗಳನ್ನು ಪ್ರಾರಂಭಿಸುವುದು;

(xviii) ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತಿನ ಅಭಿಪ್ರಾಯವನ್ನು ಪರಿಗಣಿಸಿದ ತರುವಾಯ ಅಗತ್ಯಪಡಿಸಬಹುದಾದಂತೆ, ತಾಂತ್ರಿಕ ಅಥವಾ ಲಿಪಿಕ ಅಥವಾ ಆಡಳಿತಾತ್ಮಕ ಮತ್ತು ಅಂಥ ಇತರ ಬೋಧಕೇತರ ಹುದ್ದೆಗಳನ್ನು ಪ್ರಾರಂಭಿಸುವುದು;

(xix) ವಿದ್ಯಾವಿಷಯಕ ಪರಿಷತ್ತಿನ ಶಿಫಾರಸ್ಸುಗಳ ಮೇರೆಗೆ ಫೆಲೋಶಿಪ್‌ಗಳು, ಟ್ರಾವೆಲಿಂಗ್ ಫೆಲೋಷಿಪ್‌ಗಳು, ಅಸಿಸ್ಟೆಂಟ್‌ಶಿಪ್‌ಗಳು, ವಿದ್ಯಾರ್ಥಿ ವೇತನಗಳು, ಶಿಷ್ಯವೇತನಗಳು, ಟ್ಯೂಷನ್ ವೇವರ್‌ಗಳು, ಎಕ್ಸಿಬಿಷನ್‌ಗಳು, ಪದಕಗಳು ಮತ್ತು ಪ್ರಶಸ್ತಿಗಳನ್ನು ಪ್ರಾರಂಭಿಸುವುದು;

(xx) ಶಾಸನಗಳನ್ನು ಅಧಿನಿಯಮಿಸುವುದು, ತಿದ್ದುಪಡಿ ಮಾಡುವುದು ಅಥವಾ ನಿರಸನಗೊಳಿಸುವುದು;

(xxi) ವಿದ್ಯಾವಿಷಯಕ ಪರಿಷತ್ತಿನ ಶಿಫಾರಸುಗಳ ಮೇರೆಗೆ ನಿವೃತ್ತ ಗೌರವ ಪ್ರಾಧ್ಯಾಪಕ ಬಿರುದನ್ನು ಪ್ರದಾನ ಮಾಡುವುದು;

(xxii) ಎಲ್ಲಾ ವರ್ಗಗಳ ಸಿಬ್ಬಂದಿಯ, ಅವರ ಉಪಲಬ್ಧಿಗಳು ಮತ್ತು ಅವರ ನಡತೆ ಸಂಹಿತೆಯನ್ನು ಒಳಗೊಂಡಂತೆ, ಸೇವಾ ಷರತ್ತುಗಳನ್ನು ನಿರೂಪಿಸುವುದು;

(xxiii) ಶಾಸನಗಳಿಗೆ ಅನುಸಾರವಾಗಿ ಸಿಬ್ಬಂದಿಯಲ್ಲಿ ಶಿಸ್ತನ್ನು ನಿಯಂತ್ರಿಸುವುದು ಮತ್ತು ಒತ್ತಾಯಪಡಿಸುವುದು;

(xxiv) ಈ ಅಧಿನಿಯಮ, ಶಾಸನಗಳು, ನಿಯಮಗಳು ಅಥವಾ ವಿನಿಯಮಗಳ ಮೂಲಕ ಇದಕ್ಕೆ ಪ್ರದತ್ತವಾದ ಅಥವಾ ಇದಕ್ಕೆ ವಿಧಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಅಂಥ ಇತರ ಕರ್ತವ್ಯಗಳನ್ನು ನೆರವೇರಿಸುವುದು;

(3) ಸರ್ಕಾರವು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದಂಥ ವಿಶ್ವವಿದ್ಯಾಲಯದ ಆಡಳಿತಕ್ಕೆ ಸಂಬಂಧಿಸಿದ ವಿವರಪಟ್ಟಿಕೆಗಳು, ತ:ಖ್ತೆಗಳು, ಲೆಕ್ಕಪತ್ರಗಳು ಅಥವಾ ಇತರ ವಿವರಗಳನ್ನು ಪ್ರಬಂಧಕ ಮಂಡಳಿಯು ಒದಗಿಸತಕ್ಕದ್ದು.

(4) ಪ್ರಬಂಧಕ ಮಂಡಳಿಯು, ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಪೂರೈಸುವುದಕ್ಕಾಗಿ ಅಧಿನಿಯಮ, ಶಾಸನಗಳು, ನಿಯಮಗಳು ಮತ್ತು ವಿನಿಯಮಗಳಲ್ಲಿ ಅನ್ಯಥಾ ಉಪಬಂಧಿಸಿರದ ಹೊರತು ವಿಶ್ವವಿದ್ಯಾಲಯದ ಎಲ್ಲಾ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

**24. ಓಂಬುಡ್ಸ್‌ಮನ್.–** (1) ಓಂಬುಡ್ಸ್‌ಮನ್‌ರವರು, ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಉತ್ತರದಾಯಿತ್ವ ಮತ್ತು ಪಾರದರ್ಶಕತೆಗೆ ಹೊಣೆಗಾರನಾಗಿರತಕ್ಕದ್ದು ಮತ್ತು ದೂರುಗಳು ಮತ್ತು ಕುಂದುಕೊರತೆಗಳನ್ನು ಸ್ವೀಕರಿಸುವ ಅಧಿಕಾರವನ್ನು ಹೊಂದಿರತಕ್ಕದ್ದು ಹಾಗೂ ಅಧ್ಯಕ್ಷರಿಗೆ ಕ್ರಮದ ಬಗ್ಗೆ ಶಿಫಾರಸ್ಸು ಮಾಡುವುದು ಮತ್ತು ವಿಶ್ವವಿದ್ಯಾಲಯದ ಎಲ್ಲಾ ಹಂತಗಳಲ್ಲೂ ಅತ್ಯುತ್ತಮ ಪದ್ಧತಿಗಳನ್ನು ಅನುಸರಿಸಿ ಉತ್ತಮ ಆಡಳಿತಕ್ಕೆ ಅನುಕೂಲ ಮಾಡಿಕೊಡತಕ್ಕದ್ದು.

(2) ಓಂಬುಡ್ಸ್‌ಮನ್‌ರು, ಅಧ್ಯಕ್ಷರು ಉಲ್ಲೇಖಿಸಿದ ನಿರ್ಧಾರಗಳು, ಲೋಪಗಳು, ಪ್ರಕ್ರಿಯಾತ್ಮಕ ಅಥವಾ ಆಡಳಿತಾತ್ಮಕ ದೋಷಗಳು ಅಥವಾ ವ್ಯಾಪಕವಾದ ರೂಢಿ ವಿಷಯಗಳೂ ಒಳಗೊಂಡಂತೆ ಆಪಾದಿಸಲಾದ ದುರಾಡಳಿತದ ಕುಂದುಕೊರತೆಗಳು, ಆತಂಕಗಳು ಅಥವಾ ವಿವಾದಗಳ ಬಗ್ಗೆ ತನಿಖೆ ನಡೆಸುವ ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ಯುಕ್ತ ಪರಿಹಾರ ಕ್ರಮಕ್ಕಾಗಿ ಮತ್ತು ನಿಷ್ಠೆ, ನಿಷ್ಪಕ್ಷಪಾತತೆ, ಪಾರದರ್ಶಕತೆ, ನೀತಿ ಮತ್ತು ನ್ಯಾಯದ ಪ್ರಧಾನ ಮೌಲ್ಯಗಳ ಆಧಾರದ ಮೇಲೆ ಅನೌಪಚಾರಿಕ ಮತ್ತು ರಹಸ್ಯ ವಿವಾದ ನಿರ್ವಹಣಾ ಪದ್ಧತಿಯ ಮೂಲಕ ದೂರುಗಳನ್ನು ಪರಿಹರಿಸುವುದಕ್ಕಾಗಿ ಶಿಫಾರಸ್ಸುಗಳನ್ನು ಸಲ್ಲಿಸತಕ್ಕದ್ದು.

(3) ಓಂಬುಡ್ಸ್‌ಮನ್‌ರು, ತಮ್ಮ ಕರ್ತವ್ಯಗಳನ್ನು ನಿರ್ವಹಿಸುವುದಕ್ಕಾಗಿ ಅಗತ್ಯವಾದಂಥ ಕಚೇರಿ ಕಡತಗಳು ಮತ್ತು ಮಾಹಿತಿಯನ್ನು ಪಡೆಯಲು ಅವಕಾಶವಿರತಕ್ಕದ್ದು. ಓಂಬುಡ್ಸ್‌ಮನ್‌ರು ಯಾವುದೇ ಮಾಹಿತಿಯನ್ನು ಕೋರಿದಾಗ, ಅದಕ್ಕೆ ವಿಶ್ವವಿದ್ಯಾಲಯದ ಪ್ರತಿಯೊಬ್ಬ ಅಧಿಕಾರಿಯು ಅತ್ಯಂತ ಹೆಚ್ಚಿನ ಆದ್ಯತೆ ನೀಡತಕ್ಕದ್ದು.

**25. ಓಂಬುಡ್ಸ್‌ಮನ್ ರಚನೆ.–** (1) ಓಂಬುಡ್ಸ್‌ಮನ್, ಅಧ್ಯಕ್ಷರು ನೇಮಕ ಮಾಡಿದ ಮೂವರು ಸದಸ್ಯರ ನಿಕಾಯವಾಗಿರತಕ್ಕದ್ದು, ಅವರಲ್ಲಿ ಒಬ್ಬರು ಶಿಕ್ಷಣ ಕ್ಷೇತ್ರದಲ್ಲಿ ನಿವೃತ್ತ ವಿದ್ವಾಂಸರಾಗಿರತಕ್ಕದ್ದು, ಒಬ್ಬರು ಸರ್ಕಾರದ ಕಾರ್ಯದರ್ಶಿ ಅಥವಾ ತತ್ಸಮಾನ ಹುದ್ದೆಯಲ್ಲಿ ಸೇವೆ ಸಲ್ಲಿಸಿದ ನಿವೃತ್ತ ವೃತ್ತಿದಾರ ಅಥವಾ ಅಧಿಕಾರಿಯಾಗಿರತಕ್ಕದ್ದು ಮತ್ತು ಒಬ್ಬರು, ಪಾಂಡಿತ್ಯ ಮತ್ತು ನಿಷ್ಠೆಗೆ ಹೆಸರಾದ, ಕಾನೂನು ಹಿನ್ನೆಲೆಯುಳ್ಳ ರಾಜ್ಯದ ನಿವೃತ್ತ ಜಿಲ್ಲಾ ನ್ಯಾಯಾಧೀಶ ಅಥವಾ ತತ್ಸಮಾನ ಅಧಿಕಾರಿಯಾಗಿರತಕ್ಕದ್ದು.

(2) ಓಂಬುಡ್ಸ್‌ಮನ್ ನೇಮಕದ ಅವಧಿಯು ಮೂರು ವರ್ಷಗಳಾಗಿರತಕ್ಕದ್ದು. ಸೇವಾ ಷರತ್ತುಗಳು ಶಾಸನಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

(3) ಓಂಬುಡ್ಸ್‌ಮನ್ ಸದಸ್ಯರು ಗೌರವ ಹುದ್ದೆಗಳನ್ನು ಹೊಂದಿರತಕ್ಕದ್ದು.

(4) ಸ್ವಾಭಾವಿಕ ನ್ಯಾಯದ ತತ್ವಗಳನ್ನು ಅನುಸರಿಸಿ ವಿಚಾರಣೆಯನ್ನು ನಡೆಸಿದ ತರುವಾಯ ಅಧ್ಯಕ್ಷರು, ಓಂಬುಡ್ಸ್‌ಮನ್‌ನ ಯಾವೊಬ್ಬ ಸದಸ್ಯನ ಪದಾವಧಿಯನ್ನು ಅರ್ಧದಲ್ಲಿ ನಿಲ್ಲಿಸಬಹುದು.

**26. ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತು.–** (1) ಹಣಕಾಸಿಗೆ ಸಂಬಂಧಪಟ್ಟ ಎಲ್ಲಾ ವಿಷಯಗಳ ಮೇಲ್ವಿಚಾರಣೆ ಮಾಡಲು ಮತ್ತು ನಿರ್ಧರಿಸಲು ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತು ಇರತಕ್ಕದ್ದು.

(2) ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತು ಈ ಮುಂದಿನ ಸದಸ್ಯರುಗಳನ್ನೊಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿ – ಪದನಿಮಿತ್ತ ಚೇರ್ಮನ್;

(ii) ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಆತನ ನಾಮನಿರ್ದೇಶಿತರು – ಪದನಿಮಿತ್ತ ಸದಸ್ಯರು;

(iii) ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಆತನ ನಾಮನಿರ್ದೇಶಿತರು – ಪದನಿಮಿತ್ತ ಸದಸ್ಯರು;

(iv) ಪ್ರಬಂಧಕ ಮಂಡಳಿಯು, ಮೂರು ವರ್ಷಗಳ ಅವಧಿಗಾಗಿ ನಾಮ ನಿರ್ದೇಶನ ಮಾಡಿರುವ – ಸಹಕುಲಪತಿ;

(v) ಮೂರು ವರ್ಷಗಳ ಅವಧಿಗಾಗಿ ಪ್ರಬಂಧಕ ಮಂಡಳಿಯು ನಾಮನಿರ್ದೇಶನ ಮಾಡಿರುವ ಹಣಕಾಸು ವಿಷಯದಲ್ಲಿನ ಒಬ್ಬ ಬಾಹ್ಯ ತಜ್ಞ;

(vi) ಪ್ರಬಂಧಕ ಮಂಡಳಿಯ ಪೈಕಿಯಿಂದ ಅಧ್ಯಕ್ಷರು ನಾಮನಿರ್ದೇಶನ ಮಾಡಿರುವ ಒಬ್ಬ ಸದಸ್ಯ;

(vii) ಕುಲಸಚಿವರು;

(viii) ಹಣಕಾಸು ಅಧಿಕಾರಿ –ಸದಸ್ಯ ಕಾರ್ಯದರ್ಶಿ.

**27. ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತಿನ ಪ್ರಕಾರ್ಯಗಳು ಮತ್ತು ಕರ್ತವ್ಯಗಳು.–** (1) ಲೆಕ್ಕ ಪರಿಶೋಧನೆ ಮತ್ತು ಹಣಕಾಸು ಪರಿಷತ್ತಿನ ಪ್ರಕಾರ್ಯಗಳು ಮತ್ತು ಕರ್ತವ್ಯಗಳು ಈ ಮುಂದಿನಂತೆ ಇರತಕ್ಕದ್ದು:–

(i) ವಿಶ್ವವಿದ್ಯಾಲಯದ ವಾರ್ಷಿಕ ಆಯವ್ಯಯವನ್ನು ಪರಿಶೀಲಿಸುವುದು ಮತ್ತು ಪರಿಷ್ಕರಿಸುವುದು ಹಾಗೂ ಪ್ರಬಂಧಕ ಮಂಡಳಿಗೆ ಹಣಕಾಸು ವಿಷಯಗಳ ಬಗ್ಗೆ ಶಿಫಾರಸ್ಸುಗಳನ್ನು ಮಾಡುವುದು;

(ii) ಹೊಸ ವೆಚ್ಚಕ್ಕಾಗಿ ಎಲ್ಲಾ ಪ್ರಸ್ತಾವಗಳನ್ನು ಪರಿಗಣಿಸುವುದು ಮತ್ತು ಪ್ರಬಂಧಕ ಮಂಡಳಿಗೆ ಶಿಫಾರಸ್ಸುಗಳನ್ನು ಮಾಡುವುದು;

(iii) ಲೆಕ್ಕಪತ್ರಗಳ ನಿಯತಕಾಲಿಕ ತ:ಖ್ತೆಗಳನ್ನು ಪರಿಗಣಿಸುವುದು ಮತ್ತು ಕಾಲಕಾಲಕ್ಕೆ ವಿಶ್ವವಿದ್ಯಾಲಯದ ಹಣಕಾಸಿನ ಪುನರೀಕ್ಷಣೆ ಮಾಡುವುದು ಮತ್ತು ಪುನರ್‌ಧನವಿನಿಯೋಗ ತ:ಖ್ತೆಗಳು ಮತ್ತು ಲೆಕ್ಕ ಪರಿಶೋಧನಾ ವರದಿಗಳನ್ನು ಪರಿಗಣಿಸುವುದು ಹಾಗೂ ಪ್ರಬಂಧಕ ಮಂಡಳಿಗೆ ಶಿಫಾರಸ್ಸುಗಳನ್ನು ಮಾಡುವುದು;

(iv) ವಿಶ್ವವಿದ್ಯಾಲಯಕ್ಕೆ ಬಾಧಕವನ್ನುಂಟು ಮಾಡುವ ಯಾವುದೇ ಹಣಕಾಸಿನ ಪ್ರಶ್ನೆಯ ಬಗ್ಗೆ ಸ್ವಪ್ರೇರಣೆಯಿಂದ ತಾನಾಗಿಯೇ ಆಗಲಿ ಅಥವಾ ಪ್ರಬಂಧಕ ಮಂಡಳಿಯ ಕೋರಿಕೆಯ ಮೇಲಾಗಲಿ ಪ್ರಬಂಧಕ ಮಂಡಳಿಗೆ ತನ್ನ ಅಭಿಪ್ರಾಯಗಳನ್ನು ನೀಡುವುದು ಮತ್ತು ಶಿಫಾರಸ್ಸುಗಳನ್ನು ಮಾಡುವುದು.

(v) ಪ್ರಬಂಧಕ ಮಂಡಳಿಯು ಕಾಲಕಾಲಕ್ಕೆ ನಿರ್ಧರಿಸಬಹುದಾದಂತಹ ಕೆಲವು ಹಣಕಾಸು ಮಿತಿಯನ್ನು ಮೀರಿದ ವೆಚ್ಚ ಮತ್ತು ಖರೀದಿಗಳಿಗಾಗಿ ಸಲ್ಲಿಸಿದ ಪ್ರಸ್ತಾವಗಳನ್ನು ಅನುಮೋದಿಸುವುದು;

(vi) ಪ್ರಾಧ್ಯಾಪಕರ, ಸಹ ಪ್ರಾಧ್ಯಾಪಕರ, ಸಹಾಯಕ ಪ್ರಾಧ್ಯಾಪಕರ, ಲಿಪಿಕ ಮತ್ತು ಆಡಳಿತಾತ್ಮಕ ಸಿಬ್ಬಂದಿಯ ಹೊಸ ಹುದ್ದೆಗಳನ್ನು ಸೃಜಿಸುವ ಬಗ್ಗೆ ಅಲ್ಪ ಮತ್ತು ದೀರ್ಘ ಕಾಲಾವಧಿಯ ಹಣಕಾಸಿನ ತೊಡಕುಗಳನ್ನು ಪರಿಶೀಲಿಸುವುದು ಮತ್ತು ಅದರ ಬಗ್ಗೆ ಪ್ರಬಂಧಕ ಮಂಡಳಿಗೆ ಅಭಿಪ್ರಾಯವನ್ನು ನೀಡುವುದು;

(2) ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತು ಪ್ರತಿ ವರ್ಷ ಕನಿಷ್ಠ ಎರಡು ಸಲ ಸಭೆ ಸೇರತಕ್ಕದ್ದು. ನಾಲ್ವರು ಸದಸ್ಯರು ಸಭೆಗೆ ಕೋರಂ ಆಗಿರತಕ್ಕದ್ದು.

(3) ಕುಲಪತಿಯವರು ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತಿನ ಸಭೆಗಳ ಅಧ್ಯಕ್ಷತೆ ವಹಿಸತಕ್ಕದ್ದು, ಆತನ ಗೈರು ಹಾಜರಿಯಲ್ಲಿ, ಪರಿಷತ್ತಿಗೆ ನಾಮನಿರ್ದೇಶಿತರಾದ ಸಹ–ಕುಲಪತಿಯವರು ಅಧ್ಯಕ್ಷತೆ ವಹಿಸತಕ್ಕದ್ದು. ಸದಸ್ಯರಲ್ಲಿ ಭಿನ್ನಾಭಿಪ್ರಾಯ ಉಂಟಾದ ಸಂದರ್ಭದಲ್ಲಿ, ಹಾಜರಿದ್ದ ಸದಸ್ಯರ ಬಹುಮತದ ಅಭಿಪ್ರಾಯವು ಪ್ರಭಾವವುಳ್ಳದ್ದಾಗಿರತಕ್ಕದ್ದು.

**28. ಏಕೀಕೃತ ಪದ್ಧತಿಯ ಸಹ–ಕುಲಪತಿ.–** ಏಕೀಕೃತ ಪದ್ಧತಿಯ ಸಹಕುಲಪತಿಯವರು, ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಯ ದೈನಂದಿನ ವ್ಯವಹಾರಗಳನ್ನು ಮೇಲ್ವಿಚಾರಣೆ ಮಾಡುವ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ಪ್ರಬಂಧಕ ಮಂಡಳಿಯ ಅಥವಾ ಸಂದರ್ಭಾನುಸಾರ ಕುಲಪತಿಯವರು ಪ್ರತ್ಯಾಯೋಜಿಸಿದ ಎಲ್ಲಾ ಅಧಿಕಾರಗಳನ್ನು ಅವರು ಹೊಂದಿರತಕ್ಕದ್ದು, ಮತ್ತು ಶಾಸನಗಳು ಹಾಗೂ ವಿನಿಯಮಗಳಲ್ಲಿ ಉಪಬಂಧಿಸಿದ ಎಲ್ಲಾ ಕರ್ತವ್ಯಗಳನ್ನು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**29. ಏಕೀಕೃತ ಪದ್ಧತಿಯ ಸಹಕುಲಪತಿಯವರ ನೇಮಕ.–** (1) ಸಾಕಷ್ಟು ಪ್ರಸಿದ್ಧಿ ಪಡೆದಿರುವ, ಐದು ವರ್ಷಗಳ ಅನುಭವ ಹೊಂದಿರುವ, ಪ್ರತಿಷ್ಠಿತ ಪ್ರಾಧ್ಯಾಪಕರ ಪೈಕಿಯಿಂದ, ಕುಲಪತಿಯವರು ಶಿಫಾರಸ್ಸು ಮಾಡಿದ ಮೂರು ಹೆಸರುಗಳಲ್ಲಿ ಒಬ್ಬರನ್ನು ಏಕೀಕೃತ ಪದ್ಧತಿಯ ಸಹಕುಲಪತಿಯವರನ್ನಾಗಿ ಪ್ರಬಂಧಕ ಮಂಡಳಿಯು ನೇಮಕ ಮಾಡತಕ್ಕದ್ದು.

(2) ಸಹ ಕುಲಪತಿಯವರ ಹುದ್ದೆಯ ಪದಾವಧಿಯು ವಿಶ್ವವಿದ್ಯಾಲಯದ ಕುಲಪತಿಯ ಹುದ್ದೆಯ ಪದಾವಧಿಯೊಂದಿಗೆ ಕೊನೆಗೊಳ್ಳತಕ್ಕದ್ದು.

(3) ಆತನ ಪದಾವಧಿಯು ಮುಕ್ತಾಯವಾದ ಮೇಲೆ, ಆತನ ಉತ್ತರಾಧಿಕಾರಿಯು ಆ ಪದದ ಪ್ರಭಾರವನ್ನು ವಹಿಸಿಕೊಳ್ಳುವವರೆಗೆ, ಆತನು ಪದದಲ್ಲಿ ಮುಂದುವರೆಯತಕ್ಕದ್ದು.

(4) ಏಕೀಕೃತ ಪದ್ಧತಿಯ ಸಹಕುಲಪತಿಯವರು, ಈ ಅಧಿನಿಯಮದ ಅಡಿಯಲ್ಲಿ ಶಾಸನಗಳ ಮೂಲಕ ನಿಯಮಿಸಬಹುದಾದಂತೆ ಈ ಪದ್ಧತಿಯ ಸೂಕ್ತ ಕಾರ್ಯ ನಿರ್ವಹಣೆಗೆ ಅವಶ್ಯವಾದ ಮತ್ತು ಆನುಷಂಗಿಕವಾದಂಥ ಎಲ್ಲಾ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(5) ಆತನು ವಿದ್ಯಾ ವಿಷಯಕ ಪರಿಷತ್ತಿನ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(6) ಏಕೀಕೃತ ಪದ್ಧತಿಯ ಸಹ ಕುಲಪತಿಯವರು, ವಿಶ್ವವಿದ್ಯಾಲಯದ ಕುಲಪತಿಯವರಿಗೆ ಜವಾಬ್ದಾರರಾಗಿರತಕ್ಕದ್ದು.

**30. ಸಂಯೋಜನಾ ಪದ್ಧತಿಯ ಸಹ ಕುಲಪತಿ.–** (1) ಸಾಕಷ್ಟು ಪ್ರಸಿದ್ಧರಾಗಿರುವ ಐದು ವರ್ಷಗಳ ಅನುಭವ ಹೊಂದಿರುವ ಪ್ರತಿಷ್ಠಿತ ಪ್ರಾಧ್ಯಾಪಕರ ಪೈಕಿಯಿಂದ ಕುಲಪತಿಯವರು ಶಿಫಾರಸ್ಸು ಮಾಡಿದ ಮೂರು ಹೆಸರುಗಳಲ್ಲಿ ಒಬ್ಬರನ್ನು ಸಂಯೋಜನಾ ಪದ್ಧತಿಯ ಸಹ ಕುಲಪತಿಯವರಾಗಿ ಪ್ರಬಂಧಕ ಮಂಡಳಿಯು ನೇಮಕ ಮಾಡತಕ್ಕದ್ದು.

(2) ಸಂಯೋಜನಾ ಪದ್ಧತಿಯ ಸಹ ಕುಲಪತಿಯವರು ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ಸಂಯೋಜನಾ ಪದ್ಧತಿಯ ದೈನಂದಿನ ಕಾರ್ಯಗಳನ್ನು ಮೇಲ್ವಿಚಾರಣೆ ಮಾಡತಕ್ಕದ್ದು ಹಾಗೂ ಈ ಅಧಿನಿಯಮದ ಅಡಿಯಲ್ಲಿ ಶಾಸನಗಳ ಮೂಲಕ ನಿಯಮಿಸಬಹುದಾದಂತೆ ಈ ಪದ್ಧತಿಯ ಸೂಕ್ತ ಕಾರ್ಯ ನಿರ್ವಹಣೆಗೆ ಅವಶ್ಯವಾದ ಮತ್ತು ಆನುಷಂಗಿಕವಾದ ಅಂಥ ಎಲ್ಲಾ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಎಲ್ಲಾ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(3) ಆತನು ವ್ಯವಸ್ಥಾಪನಾ ಪರಿಷತ್ತಿನ ಪದನಿಮಿತ್ತ ಚೇರ್ಮನ್ ಆಗಿರತಕ್ಕದ್ದು.

(4) ಆತನು, ವಿಶ್ವವಿದ್ಯಾಲಯದ ಕುಲಪತಿಯವರಿಗೆ ಜವಾಬ್ದಾರನಾಗಿರತಕ್ಕದ್ದು.

(5) ಸಹ ಕುಲಪತಿಯವರ ಹುದ್ದೆಯ ಪದಾವಧಿಯು, ವಿಶ್ವವಿದ್ಯಾಲಯದ ಕುಲಪತಿಯ ಹುದ್ದೆಯ ಪದಾವಧಿಯೊಂದಿಗೆ ಕೊನೆಗೊಳ್ಳತಕ್ಕದ್ದು.

(6) ಆತನ ಅವಧಿಯು ಮುಕ್ತಾಯವಾದ ಮೇಲೆ, ಆತನ ಉತ್ತರಾಧಿಕಾರಿಯು ಹುದ್ದೆಯ ಪ್ರಭಾರವನ್ನು ವಹಿಸಿಕೊಳ್ಳುವವರೆಗೆ, ಆತನು ಹುದ್ದೆಯಲ್ಲಿ ಮುಂದುವರೆಯತಕ್ಕದ್ದು.

(7) ಅನುಸೂಚಿಯ ಭಾಗ-IIರ ಉಪಬಂಧಗಳು ಏಕೀಕೃತ ಮತ್ತು ಸಂಯೋಜನಾ ಪದ್ಧತಿಗಳ ಕಾರ್ಯ ನಿರ್ವಹಣೆಯನ್ನು ನಿಯಂತ್ರಿಸುವ ಪ್ರಾಧಿಕಾರಗಳಿಗೆ ಸಂಬಂಧಿಸಿವೆ.

**31. ವಿದ್ಯಾವಿಷಯಕ ಪರಿಷತ್ತು.–** (1) ವಿದ್ಯಾವಿಷಯಕ ಪರಿಷತ್ತು, ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಯ ಪ್ರಧಾನ ವಿದ್ಯಾವಿಷಯಕ ನಿಕಾಯವಾಗಿರತಕ್ಕದ್ದು ಮತ್ತು ಈ ಅಧಿನಿಯಮದ, ಶಾಸನಗಳ ಮತ್ತು ವಿನಿಯಮಗಳ ಉಪಬಂಧಗಳಿಗೊಳಪಟ್ಟು, ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಯ ಕಾರ್ಯನೀತಿಗಳನ್ನು ರೂಪಿಸುವುದನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಶೈಕ್ಷಣಿಕ ವ್ಯವಹಾರ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

(2) ವಿದ್ಯಾವಿಷಯಕ ಪರಿಷತ್ತಿನ ರಚನೆಯು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(ಎ) ಸಹ ಕುಲಪತಿ, ಏಕೀಕೃತ ಪದ್ಧತಿ, ಪದನಿಮಿತ್ತ ಚೇರ್ಮನ್;

(ಬಿ) ಸಹ ಕುಲಪತಿ, ಸಂಯೋಜನಾ ಪದ್ಧತಿ, ಪದನಿಮಿತ್ತ ಸದಸ್ಯ;

(ಸಿ) ಜೇಷ್ಠತೆಯ ಆಧಾರದ ಮೇಲೆ ಸರತಿ ಪ್ರಕಾರ ಮೂರು ವರ್ಷಗಳ ಅವಧಿಗಾಗಿ ಅಧ್ಯಕ್ಷರು ನಾಮ ನಿರ್ದೇಶನ ಮಾಡಿದ ವಿದ್ಯಾಲಯಗಳ ಇಬ್ಬರು ಡೀನ್‌ರು;

(ಡಿ) ಜೇಷ್ಠತೆಯ ಆಧಾರದ ಮೇಲೆ ಸರತಿಯ ಪ್ರಕಾರ ಮೂರು ವರ್ಷಗಳ ಅವಧಿಗಾಗಿ ಅಧ್ಯಕ್ಷರು ನಾಮನಿರ್ದೇಶನ ಮಾಡಿದ ಇಬ್ಬರು ಪ್ರಾಧ್ಯಾಪಕರು;

(ಇ) ವಿಶ್ವವಿದ್ಯಾಲಯಕ್ಕೆ ಹೊರಗಿನವರಾಗಿರುವ ಪ್ರತಿಷ್ಠಿತರಾದ ವಿದ್ಯಾವಿಷಯಕ ತಜ್ಞರ ಪೈಕಿಯಿಂದ ಅಧ್ಯಕ್ಷರು ಮೂರು ವರ್ಷಗಳ ಅವಧಿಗಾಗಿ ನಾಮನಿರ್ದೇಶನ ಮಾಡಿದ ಐವರು ಸದಸ್ಯರು, ಅವರಲ್ಲಿ ಕನಿಷ್ಠ ಒಬ್ಬರು ಮಹಿಳೆ, ಒಬ್ಬರು ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸರ್ಕಾರೇತರ ಸಂಸ್ಥೆಗೆ ಸೇರಿದವರು, ಒಬ್ಬರು ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದವರು ಮತ್ತು ಒಬ್ಬರು ಇತರ ಹಿಂದುಳಿದ ವರ್ಗಗಳಿಗೆ ಸೇರಿದವರಾಗಿರತಕ್ಕದ್ದು;

(ಎಫ್) ನಿರ್ದೇಶಕರು, ಅನ್ವೇಷಣೆ, ಸಂಶೋಧನೆ ಮತ್ತು ಗುಣಮಟ್ಟ;

(ಜಿ) ನಿರ್ದೇಶಕರು, ಜ್ಞಾನ ಸಂಪನ್ಮೂಲಗಳು;

(ಹೆಚ್) ನಿರ್ದೇಶಕರು, ವಿದ್ಯಾರ್ಥಿ ಕಲ್ಯಾಣ ಮತ್ತು ದೈಹಿಕ ಶಿಕ್ಷಣ;

(ಐ) ಮೆರಿಟ್ ಆಧಾರದ ಮೇಲೆ ಸರತಿ ಪ್ರಕಾರ, ಕುಲಪತಿಯವರು ಒಂದು ವರ್ಷದ ಅವಧಿಗಾಗಿ, ನಾಮನಿರ್ದೇಶನ ಮಾಡಿದ ಇಬ್ಬರು ವಿದ್ಯಾರ್ಥಿ ಪ್ರತಿನಿಧಿಗಳು, ಅವರಲ್ಲಿ ಸಂಶೋಧನಾ ವಿದ್ವಾಂಸರ ಪೈಕಿ ಒಬ್ಬರು ಮತ್ತು ವಿಶ್ವವಿದ್ಯಾಲಯದ ವಿವಿಧ ವಿದ್ಯಾಲಯಗಳ ಸ್ನಾತಕೋತ್ತರ ವಿದ್ಯಾರ್ಥಿಗಳ ಪೈಕಿ ಇನ್ನೊಬ್ಬರು;

(ಜೆ) ರಿಜಿಸ್ಟ್ರಾರ್ – ಸದಸ್ಯ ಕಾರ್ಯದರ್ಶಿ:

ಪರಂತು, ಪರೀಕ್ಷೆಗಳು, ಆಯ್ಕೆ ಸಮಿತಿಗಳು, ಭೋಧನಾ ಸಿಬ್ಬಂದಿಯ ನೇಮಕಾತಿಗಳು ಮತ್ತು ಸೇವಾ ಷರತ್ತುಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಕುರಿತ ಚರ್ಚೆಗಳಲ್ಲಿ ವಿದ್ಯಾರ್ಥಿ ಸದಸ್ಯರು ಭಾಗವಹಿಸಲು ಅವಕಾಶ ನೀಡತಕ್ಕದ್ದಲ್ಲ.

**32. ವಿದ್ಯಾವಿಷಯಕ ಪರಿಷತ್ತಿನ ಅಧಿಕಾರಗಳು ಮತ್ತು ಕರ್ತವ್ಯಗಳು.–** ಈ ಅಧಿನಿಯಮ ಮತ್ತು ವಿನಿಯಮಗಳ ಉಪಬಂಧಗಳಿಗೆ ಒಳಪಟ್ಟು, ವಿದ್ಯಾವಿಷಯಕ ಪರಿಷತ್ತು, ತನ್ನಲ್ಲಿ ನಿಹಿತವಾದ ಎಲ್ಲಾ ಇತರ ಅಧಿಕಾರಗಳ ಜೊತೆಗೆ, ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ವಿಶ್ವವಿದ್ಯಾಲಯ ಶೈಕ್ಷಣಿಕ ಕಾರ್ಯನೀತಿಗಳ ಮೇಲೆ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸುವುದು ಮತ್ತು ಕಾಲೇಜು ಮತ್ತು ಸಂಸ್ಥೆಗಳಲ್ಲಿ ಶಿಕ್ಷಣ (instruction), ಸಹಕಾರ ಭೋಧನಾ ವಿಧಾನಗಳ ಬಗ್ಗೆ ನಿರ್ದೇಶನಗಳನ್ನು ನೀಡುವುದು, ಶೈಕ್ಷಣಿಕ ಗುಣಮಟ್ಟಗಳಲ್ಲಿ ಸಂಶೋಧನೆ ಅಥವಾ ಸುಧಾರಣೆಗಳ ಮೌಲ್ಯಮಾಪನ ಮಾಡುವುದು;

(2) ಅಂತರ-ವಿದ್ಯಾಲಯ ಆಧಾರಿತ ಯೋಜನೆಗಳನ್ನು ಕೈಗೊಳ್ಳುವುದಕ್ಕಾಗಿ, ಅಂತರ-ವಿದ್ಯಾಲಯ ಸಮನ್ವಯ ಮಾಡುವುದು, ಸಮಿತಿಗಳು ಅಥವಾ ಮಂಡಳಿಗಳನ್ನು ಸ್ಥಾಪಿಸುವುದು ಅಥವಾ ನೇಮಕ ಮಾಡುವುದು;

(3) ಸ್ವಪ್ರೇರಣೆಯಿಂದ ತಾನಾಗಿಯೇ ಅಥವಾ ಪ್ರಬಂಧಕ ಮಂಡಳಿಯ ಅಥವಾ ಕುಲಪತಿಯವರ ಅಥವಾ ವಿದ್ಯಾಲಯದ ಕೋರಿಕೆಯ ಮೇಲಾಗಲೀ ಸಾಮಾನ್ಯ ಶೈಕ್ಷಣಿಕ ಹಿತಾಸಕ್ತಿಯ ವಿಷಯಗಳನ್ನು ಪರಿಗಣಿಸುವುದು ಮತ್ತು ಅದರ ಬಗ್ಗೆ ಸೂಕ್ತ ಕ್ರಮವನ್ನು ಕೈಗೊಳ್ಳುವುದು;

(4) ಅಧ್ಯಯನಗಳ ವ್ಯಾಸಂಗ ಕ್ರಮಗಳಿಗೆ, ಪರೀಕ್ಷೆಗಳ ಸ್ಕೀಮ್‌ಗಳಿಗೆ ಸಂಬಂಧಿಸಿದಂತೆ ಮತ್ತು ಯಾವ ಷರತ್ತುಗಳಿಗೆ ಒಳಪಟ್ಟು ಪದವಿಗಳು, ಡಿಪ್ಲೋಮೋಗಳು, ಪ್ರಮಾಣ ಪತ್ರಗಳು ಹಾಗೂ ಇತರೆ ಶಿಕ್ಷಣ ಪ್ರಶಸ್ತಿಗಳಿಗೆ ವಿದ್ಯಾರ್ಥಿಗಳಿಗೆ ಪ್ರವೇಶ ಕೊಡತಕ್ಕದ್ದೋ, ಅಂಥ ಷರತ್ತುಗಳಿಗೆ ಸಂಬಂಧಿಸಿದಂತೆ ಮತ್ತು ಪರೀಕ್ಷೆಯ ಫಲಿತಾಂಶಗಳನ್ನು ಘೋಷಿಸುವುದಕ್ಕೆ ಸಂಬಂಧಿಸಿದ ವಿನಿಯಮಗಳನ್ನು ರೂಪಿಸುವುದು;

(5) ವಿಶ್ವವಿದ್ಯಾಲಯದಲ್ಲಿ ಬೋಧನಾ ಹುದ್ದೆಗಳ ಸೃಜನೆ, ರದ್ಧತಿ ಅಥವಾ ವರ್ಗೀಕರಣ ಮತ್ತು ಉಪಲಬ್ಧಿಗಳು ಹಾಗೂ ಅದಕ್ಕೆ ಲಗತ್ತಾಗಿರುವ ಕರ್ತವ್ಯಗಳಿಗೆ ಸಂಬಂಧಿಸಿದಂತೆ ಪ್ರಬಂಧಕ ಮಂಡಳಿಗೆ ಶಿಫಾರಸ್ಸುಗಳನ್ನು ಮಾಡುವುದು;

(6) ವಿದ್ಯಾಲಯಗಳು/ಕೇಂದ್ರಗಳ ಸಂಘಟನೆಗಾಗಿ ಯೋಜನೆಗಳನ್ನು ರೂಪಿಸುವುದು ಹಾಗೂ ಮಾರ್ಪಾಟುಗೊಳಿಸುವುದು ಅಥವಾ ಪರಿಷ್ಕರಿಸುವುದು, ಮತ್ತು ಅಂಥ ವಿದ್ಯಾಲಯಗಳಿಗೆ/ ಕೇಂದ್ರಗಳಿಗೆ ಆಯಾ ವಿಷಯಗಳನ್ನು ವಹಿಸಿಕೊಡುವುದು ಮತ್ತು ಯಾವುದೇ ವಿದ್ಯಾಲಯದ/ ಕೇಂದ್ರದ ರದ್ಧತಿಯ ಅಥವಾ ಉಪವಿಭಜನೆಯ ಬಗ್ಗೆ ಅಥವಾ ಒಂದು ವಿದ್ಯಾಲಯವನ್ನು/ಕೇಂದ್ರವನ್ನು ಮತ್ತೊಂದರೊಡನೆ ಸಂಯೋಜಿಸುವುದರ ಸೂಕ್ತತೆಯ ಬಗ್ಗೆ ಪ್ರಬಂಧಕ ಮಂಡಳಿಗೆ ವರದಿಯನ್ನು ಸಹ ಮಾಡುವುದು;

(7) ವಿಶ್ವವಿದ್ಯಾಲಯದಲ್ಲಿ ದಾಖಲಾದವರ ಹೊರತಾಗಿ ಇತರ ವ್ಯಕ್ತಿಗಳಿಗೆ ಶಿಕ್ಷಣ ಹಾಗೂ ಪರೀಕ್ಷೆಗಾಗಿ ವಿನಿಯಮಗಳ ಮೂಲಕ ವ್ಯವಸ್ಥೆಗಳನ್ನು ಕಲ್ಪಿಸುವುದು;

(8) ವಿಶ್ವವಿದ್ಯಾಲಯದಲ್ಲಿ ಸಂಶೋಧನೆಗೆ ಪ್ರೋತ್ಸಾಹಿಸುವುದು ಮತ್ತು ಅಂಥ ಸಂಶೋಧನೆ ಕುರಿತು ಕಾಲಕಾಲಕ್ಕೆ ವರದಿಗಳನ್ನು ಸಲ್ಲಿಸುವಂತೆ ಅಗತ್ಯಪಡಿಸುವುದು;

(9) ವಿಶ್ವವಿದ್ಯಾಲಯದ ಏಕೀಕೃತ ವ್ಯವಸ್ಥೆಯ ವ್ಯಾಸಂಗ ವಿಭಾಗ (ಫ್ಯಾಕಲ್ಟಿ), ಪರಿಷತ್ತುಗಳು ಹಾಗೂ ಕೇಂದ್ರಗಳು ಸಲ್ಲಿಸಿದ ಪ್ರಸ್ತಾವನೆಗಳನ್ನು ಪರಿಗಣಿಸುವುದು;

(10) ವಿಶ್ವವಿದ್ಯಾಲಯದ ಪ್ರವೇಶಕ್ಕಾಗಿ ಸಮಿತಿಗಳನ್ನು ನೇಮಕ ಮಾಡುವುದು;

(11) ಇತರೆ ವಿಶ್ವವಿದ್ಯಾಲಯಗಳ ಹಾಗೂ ಸಂಸ್ಥೆಗಳ ಡಿಪ್ಲೋಮೋಗಳು ಹಾಗೂ ಪದವಿಗಳಿಗೆ ಮಾನ್ಯತೆ ನೀಡುವುದು ಮತ್ತು ವಿಶ್ವವಿದ್ಯಾಲಯದ ಡಿಪ್ಲೋಮೋಗಳು ಹಾಗೂ ಪದವಿಗಳಿಗೆ ಸಂಬಂಧಿಸಿದಂತೆ ಅವುಗಳ ಸಮಾನತೆಯನ್ನು ನಿರ್ಧರಿಸುವುದು;

(12) ಪ್ರಬಂಧಕ ಮಂಡಳಿಯು ಒಪ್ಪಿಕೊಂಡ ಯಾವುದೇ ಷರತ್ತುಗಳಿಗೆ ಒಳಪಟ್ಟು ಸಂಶೋಧನಾ ವೇತನ, ವಿದ್ಯಾರ್ಥಿ ವೇತನ ಹಾಗೂ ಇತರೆ ಬಹುಮಾನಗಳಿಗೆ ಸಂಬಂಧಿಸಿದಂತೆ ಸ್ಪರ್ಧೆಯ ಸಮಯ, ವಿಧಾನ ಹಾಗೂ ಷರತ್ತುಗಳನ್ನು ನಿಗದಿಪಡಿಸುವುದು, ಹಾಗೂ ಅವುಗಳನ್ನು ಪ್ರದಾನ ಮಾಡುವುದು;

(13) ಪರೀಕ್ಷಕರ ನೇಮಕಾತಿಗೆ ಮತ್ತು ಅವಶ್ಯಕವಿದ್ದಲ್ಲಿ ಅವರನ್ನು ತೆಗೆದುಹಾಕುವುದಕ್ಕೆ ಹಾಗೂ ಅವರ ಶುಲ್ಕಗಳು, ಉಪಲಬ್ಧಿಗಳು ಮತ್ತು ಪ್ರಯಾಣ ಹಾಗೂ ಇತರೆ ವೆಚ್ಚಗಳನ್ನು ನಿಗದಿಪಡಿಸುವ ಸಂಬಂಧದಲ್ಲಿ ಪ್ರಬಂಧಕ ಮಂಡಳಿಗೆ ಶಿಫಾರಸ್ಸುಗಳನ್ನು ಮಾಡುವುದು.

(14) ತರಗತಿಗಳು ಹಾಗೂ ಪರೀಕ್ಷೆಗಳನ್ನು ನಡೆಸಲು ಹಾಗೂ ಅವುಗಳನ್ನು ನಡೆಸುವುದಕ್ಕಾಗಿ ದಿನಾಂಕಗಳನ್ನು ನಿಗದಿಪಡಿಸಲು ವ್ಯವಸ್ಥೆಗಳನ್ನು ಮಾಡುವುದು;

(15) ವಿವಿಧ ಪರೀಕ್ಷೆಗಳ ಫಲಿತಾಂಶವನ್ನು ಘೋಷಿಸುವುದು, ಅಥವಾ ಹಾಗೆ ಮಾಡುವುದಕ್ಕಾಗಿ ಸಮಿತಿಗಳನ್ನು ಅಥವಾ ಅಧಿಕಾರಿಗಳನ್ನು ನೇಮಕ ಮಾಡುವುದು, ಹಾಗೂ ಪದವಿಗಳು, ಗೌರವ ಪದವಿಗಳು, ಡಿಪ್ಲೊಮೋಗಳು, ಲೈಸನ್ಸುಗಳು, ಬಿರುದುಗಳು ಹಾಗೂ ಗೌರವ ಪ್ರತೀಕಗಳನ್ನು ಪ್ರದಾನ ಮಾಡುವುದಕ್ಕೆ ಅಥವಾ ನೀಡುವುದಕ್ಕೆ ಸಂಬಂಧಿಸಿದಂತೆ ಶಿಫಾರಸ್ಸುಗಳನ್ನು ಮಾಡುವುದು;

(16) ಸ್ಟೈಪಂಡ್‌ಗಳು, ವಿದ್ಯಾರ್ಥಿವೇತನ, ಸಹಾಯಕ ವೇತನ, ಪದಕಗಳು ಹಾಗೂ ಬಹುಮಾನಗಳನ್ನು ನೀಡುವುದು ಮತ್ತು ವಿನಿಯಮಗಳಿಗೆ ಹಾಗೂ ವ್ಯಾಸಂಗ ವಿಭಾಗ (ಫ್ಯಾಕಲ್ಟಿ) ಪರಿಷತ್ತುಗಳ ಶಿಫಾರಸ್ಸಿನ ಮೇಲೆ ಪ್ರಶಸ್ತಿಗಳಿಗೆ ಲಗತ್ತಾಗಿರಬಹುದಾದಂಥ ಇತರೆ ಷರತ್ತುಗಳಿಗೆ ಅನುಸಾರವಾಗಿ ಇತರ ಪ್ರಶಸ್ತಿಗಳನ್ನು ಸ್ಥಾಪಿಸುವುದು.

(17) ಗೊತ್ತುಪಡಿಸಿದ ಅಥವಾ ಶಿಫಾರಸ್ಸು ಮಾಡಿದ ಪಠ್ಯಪುಸ್ತಕಗಳ ಪಟ್ಟಿಯನ್ನು ಪ್ರಕಟಿಸುವುದು ಮತ್ತು ಅಧ್ಯಯನದ ವ್ಯಾಸಂಗ ಕ್ರಮಕ್ಕೆ ಗೊತ್ತುಪಡಿಸಿದ ಪಠ್ಯ ವಿಷಯವನ್ನು ಪ್ರಕಟಿಸುವುದು.

(18) ಶೈಕ್ಷಣಿಕ ವಿಷಯಗಳ ಸಂಬಂಧದಲ್ಲಿ, ಈ ಅಧಿನಿಯಮದ ಹಾಗೂ ವಿನಿಯಮಗಳ ಉಪಬಂಧಗಳನ್ನು ಸೂಕ್ತವಾಗಿ ಕಾರ್ಯಗತಗೊಳಿಸಲು ಅವಶ್ಯಕವಾಗಬಹುದಾದಂಥ ಎಲ್ಲಾ ಕರ್ತವ್ಯಗಳನ್ನು ನಿರ್ವಹಿಸುವುದು ಮತ್ತು ಅಂಥ ಎಲ್ಲಾ ಕಾರ್ಯಗಳನ್ನು ಮಾಡುವುದು.

**33. ವಿದ್ಯಾವಿಷಯಕ ಪರಿಷತ್ತಿನ ಸಭೆಗಳ ಕಾರ್ಯವಿಧಾನ.–** (1) ವಿದ್ಯಾವಿಷಯಕ ಪರಿಷತ್ತು, ಅವಶ್ಯಕವಿರಬಹುದಾದಷ್ಟು ಸಲ, ಆದರೆ ಎರಡು ಸಭೆಗಳ ನಡುವಿನ ಮಧ್ಯಂತರವು ಆರು ತಿಂಗಳ ಅವಧಿಯನ್ನು ಮೀರದಂತೆ, ಒಂದು ಶೈಕ್ಷಣಿಕ ವರ್ಷದಲ್ಲಿ ಮೂರು ಸಲಕ್ಕಿಂತ ಕಡಿಮೆ ಇಲ್ಲದಂತೆ ಸಭೆ ಸೇರತಕ್ಕದ್ದು.

(2) ವಿದ್ಯಾವಿಷಯಕ ಪರಿಷತ್ತಿನ ಸದಸ್ಯರ ಒಟ್ಟು ಸಂಖ್ಯೆಯ ಅರ್ಧದಷ್ಟು ಸಂಖ್ಯೆಯು, ವಿದ್ಯಾವಿಷಯಕ ಪರಿಷತ್ತಿನ ಸಭೆಗೆ ಕೋರಂ ಆಗಿರತಕ್ಕದ್ದು.

(3) ಸದಸ್ಯರ ನಡುವೆ ಭಿನ್ನಾಭಿಪ್ರಾಯ ಉಂಟಾದ ಸಂದರ್ಭದಲ್ಲಿ, ಬಹುಮತದ ಅಭಿಪ್ರಾಯವನ್ನು ಅಂಗೀಕರಿಸತಕ್ಕದ್ದು.

(4) ಚೇರ್‌ಮನ್‌ರವರೂ ಒಳಗೊಂಡಂತೆ ವಿದ್ಯಾವಿಷಯಕ ಪರಿಷತ್ತಿನ ಪ್ರತಿಯೊಬ್ಬ ಸದಸ್ಯನು ಒಂದೊಂದು ಮತವನ್ನು ಹೊಂದಿರತಕ್ಕದ್ದು ಮತ್ತು ವಿದ್ಯಾವಿಷಯಕ ಪರಿಷತ್ತು ನಿರ್ಧರಿಸಬೇಕಾದ ಯಾವುದೇ ಪ್ರಶ್ನೆಯ ಮೇಲೆ ಸಮಾನ ಮತಗಳು ಬಂದ ಸಂದರ್ಭದಲ್ಲಿ, ಚೇರ್‌ಮನ್‌ರವರು ಅಥವಾ ಸಂದರ್ಭಾನುಸಾರ ಸಭೆಯ ಅಧ್ಯಕ್ಷತೆಯನ್ನು ವಹಿಸಿದಂಥ ಸದಸ್ಯನು, ಹೆಚ್ಚುವರಿಯಾಗಿ ಒಂದು ನಿರ್ಣಾಯಕ ಮತವನ್ನು ಹೊಂದಿರತಕ್ಕದ್ದು.

(5) ವಿದ್ಯಾವಿಷಯಕ ಪರಿಷತ್ತಿನ ಚೇರ್‌ಮನ್‌ರವರು, ವಿದ್ಯಾವಿಷಯಕ ಪರಿಷತ್ತಿನ ಪ್ರತಿಯೊಂದು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಅವರ ಗೈರು ಹಾಜರಿಯಲ್ಲಿ ಸಭೆಯ ದಿನದಂದು ಹಾಜರಿರುವ ಅತ್ಯಂತ ಹಿರಿಯ ಡೀನರು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(6) ವಿದ್ಯಾವಿಷಯಕ ಪರಿಷತ್ತು ತುರ್ತು ಕ್ರಮಗಳನ್ನು ಕೈಗೊಳ್ಳುವ ಅವಶ್ಯಕತೆ ಕಂಡುಬಂದಲ್ಲಿ, ಸದಸ್ಯರಿಗೆ ಕಾಗದ ಪತ್ರಗಳನ್ನು ಕಳುಹಿಸಿಕೊಡುವ ಮೂಲಕ ನಡೆಸಬೇಕಾದ ಕಾರ್ಯಕಲಾಪಗಳಿಗೆ, ಚೇರ್‌ಮನ್‌ರವರು ಅನುಮತಿ ನೀಡಬಹುದು. ಕೈಗೊಳ್ಳಲು ಪ್ರಸ್ತಾಪಿಸಿದ ಕ್ರಮವನ್ನು, ಸದಸ್ಯರು ಬಹುಮತದಿಂದ ಒಪ್ಪಿದ ಹೊರತು ಕೈಗೊಳ್ಳತಕ್ಕದ್ದಲ್ಲ. ಹಾಗೆ ಕೈಗೊಂಡ ಕ್ರಮವನ್ನು ಎಲ್ಲಾ ಸದಸ್ಯರಿಗೂ ತಕ್ಷಣ ತಿಳಿಸತಕ್ಕದ್ದು ಮತ್ತು ಕಾಗದ ಪತ್ರಗಳನ್ನು, ಸ್ಥಿರೀಕರಣಕ್ಕಾಗಿ ವಿದ್ಯಾವಿಷಯಕ ಪರಿಷತ್ತಿನ ಮುಂಬರುವ ಸಭೆಯ ಮುಂದೆ ಮಂಡಿಸತಕ್ಕದ್ದು.

**34. ವ್ಯವಸ್ಥಾಪನಾ ಪರಿಷತ್ತು.–** ಸಂಯೋಜಿತ ಕಾಲೇಜುಗಳ, ಸ್ವಾಯತ್ತ ಶಿಕ್ಷಣ ಸಂಸ್ಥೆಗಳ ಸಂಯೋಜನೆ, ಪಠ್ಯಕ್ರಮದ ವ್ಯವಸ್ಥಾಪನೆ, ಪರೀಕ್ಷೆಗಳನ್ನು ನಡೆಸುವುದು, ಆಡಳಿತಕ್ಕಾಗಿ ಮತ್ತು ದೂರ ಶಿಕ್ಷಣ ಹಾಗೂ ಅಂಚೆ ತೆರಪಿನ ಕೋರ್ಸುಗಳಿಗೆ ಯೋಜನೆಯನ್ನು ರೂಪಿಸುವುದಕ್ಕಾಗಿ ಹಾಗೂ ಅದನ್ನು ಕಾರ್ಯರೂಪಕ್ಕೆ ತರುವುದಕ್ಕಾಗಿ ಹೊಣೆಗಾರವಾದ ವಿಶ್ವವಿದ್ಯಾಲಯದ ಸಂಯೋಜನಾ ಪದ್ಧತಿಗಾಗಿ ಒಂದು ವ್ಯವಸ್ಥಾಪನಾ ಪರಿಷತ್ತು ಇರತಕ್ಕದ್ದು.

**35. ವ್ಯವಸ್ಥಾಪನಾ ಪರಿಷತ್ತಿನ ರಚನೆ.–** ವ್ಯವಸ್ಥಾಪನಾ ಪರಿಷತ್ತು ಈ ಮುಂದಿನ ಸದಸ್ಯರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಸಂಯೋಜನಾ ಪದ್ಧತಿಯ ಸಹ ಕುಲಪತಿ – ಪದನಿಮಿತ್ತ ಅಧ್ಯಕ್ಷರು;

(ಬಿ) ಏಕೀಕೃತ ಪದ್ಧತಿಯ ಸಹ–ಕುಲಪತಿ;

(ಸಿ) ಕಾಲೇಜು ಶಿಕ್ಷಣ ಆಯುಕ್ತರು ಅಥವಾ ಜಂಟಿ–ನಿರ್ದೇಶಕರ ಶ್ರೇಣಿಗಿಂತ ಕಡಿಮೆಯಿಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(ಡಿ) ನಿರ್ದೇಶಕರು, ಸಂಯೋಜನೆ ಹಾಗೂ ಪರಿಕ್ಷಾ ಮಂಡಳಿ;

(ಇ) ನಿರ್ದೇಶಕರು, ಮುಕ್ತ ಹಾಗೂ ದೂರ ಶಿಕ್ಷಣ ಮಂಡಳಿ;

(ಎಫ್) ನಿರ್ದೇಶಕರು, ಅಧ್ಯಯನ ಮಂಡಳಿ;

(ಜಿ) ಮೂರು ವರ್ಷಗಳ ಅವಧಿಗಾಗಿ ಕುಲಪತಿಯವರು ನಾಮನಿರ್ದೇಶನ ಮಾಡಿದ ಏಕೀಕೃತ ಪದ್ಧತಿಯಿಂದ –ಇಬ್ಬರು ಡೀನ್‌ರು;

(ಹೆಚ್) ಸರದಿ ಆಧಾರದ ಮೇಲೆ ಎರಡು ವರ್ಷಗಳ ಅವಧಿಗಾಗಿ ಕುಲಪತಿಯವರು ನಾಮ ನಿರ್ದೇಶಿಸಿದ ಸಂಯೋಜಿತ ಕಾಲೇಜುಗಳ ಐವರು ಪ್ರಾಂಶುಪಾಲರು, ಅವರಲ್ಲಿ ಒಬ್ಬರು ಸ್ವಾಯತ್ತ ಕಾಲೇಜಿನವರಾಗಿರಬೇಕು;

(ಐ) ಲೆಕ್ಕಪರಿಶೋಧನೆ ಹಾಗೂ ಹಣಕಾಸು ಪರಿಷತ್ತಿನ ಒಬ್ಬ ಪ್ರತಿನಿಧಿ;

(ಜೆ) ಕುಲಪತಿಯವರು ನಾಮ ನಿರ್ದೇಶನ ಮಾಡಿದ ಇಬ್ಬರು ಸದಸ್ಯರು, ಅವರಲ್ಲಿ ಒಬ್ಬರು ಉದ್ಯಮಿಯಾಗಿರತಕ್ಕದ್ದು, ಮತ್ತೊಬ್ಬರು ಖ್ಯಾತ ಶಿಕ್ಷಣ ತಜ್ಞರಾಗಿರತಕ್ಕದ್ದು;

(ಕೆ) ಮೆರಿಟ್ ಆಧಾರದ ಮೇಲೆ ಕುಲಪತಿಯವರು ಒಂದು ವರ್ಷದ ಅವಧಿಗಾಗಿ ನಾಮ ನಿರ್ದೇಶಿಸಬೇಕಾದ ಇಬ್ಬರು ವಿದ್ಯಾರ್ಥಿ ಪ್ರತಿನಿಧಿಗಳು, ಇವರಲ್ಲಿ ಪದವಿ ವಿದ್ಯಾರ್ಥಿಗಳ ಪೈಕಿಯಿಂದ ಒಬ್ಬರು ಮತ್ತು ವಿಶ್ವವಿದ್ಯಾಲಯದ ಸಂಯೋಜನಾ ಪದ್ಧತಿಯ ಅಡಿಯಲ್ಲಿ ಬರುವ ವಿವಿಧ ಕಾಲೇಜುಗಳು ಹಾಗೂ ಸ್ನಾತಕೋತ್ತರ ಕೇಂದ್ರಗಳ ಸ್ನಾತಕೋತ್ತರ ವಿದ್ಯಾರ್ಥಿಗಳ ಪೈಕಿಯಿಂದ ಒಬ್ಬರು ಇರತಕ್ಕದ್ದು;

(ಎಲ್) ರಿಜಿಸ್ಟ್ರಾರ್ – ಸದಸ್ಯ ಕಾರ್ಯದರ್ಶಿ:

ಪರಂತು, ಪರೀಕ್ಷೆಗಳು, ಆಯ್ಕೆ ಸಮಿತಿಗಳು, ನೇಮಕಾತಿಗಳು ಹಾಗೂ ಇವುಗಳಿಗೆ ಸಂಬಂಧಪಟ್ಟ ವಿಷಯಗಳಿಗೆ ಸಂಬಂಧಪಡುವ ಚರ್ಚೆಗಳಲ್ಲಿ ವಿದ್ಯಾರ್ಥಿ ಸದಸ್ಯರು ಭಾಗವಹಿಸಲು ಅವಕಾಶ ನೀಡತಕ್ಕದ್ದಲ್ಲ.

**36. ವ್ಯವಸ್ಥಾಪನಾ ಪರಿಷತ್ತಿನ ಪ್ರಕಾರ್ಯಗಳು.–** ಈ ಅಧಿನಿಯಮ, ನಿಯಮಗಳು ಹಾಗೂ ವಿನಿಯಮಗಳ ಉಪಬಂಧಗಳಿಗೆ ಒಳಪಟ್ಟು, ವ್ಯವಸ್ಥಾಪನಾ ಪರಿಷತ್ತು, ತನ್ನಲ್ಲಿ ನಿಹಿತವಾಗಿರುವ ಎಲ್ಲಾ ಇತರ ಅಧಿಕಾರಗಳ ಜೊತೆಗೆ ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ಸಂಯೋಜಿತ ಕಾಲೇಜುಗಳ ಸಂಬಂಧದಲ್ಲಿ ವ್ಯಾಸಂಗ ಕ್ರಮದ ಸ್ವರೂಪ, ವಿನಿಯಮಗಳು, ವ್ಯಾಸಂಗ ಕ್ರಮದ ವಿಷಯಗಳು, ಅಧ್ಯಾಪನ (ಪೆಡಗಾಜಿ) ಪದ್ಧತಿಯನ್ನು ನಿರ್ಧರಿಸುವುದು, ಪರೀಕ್ಷಕರ ಪಟ್ಟಿ ಹಾಗೂ ವ್ಯಾಸಂಗ ವಿಭಾಗಗಳ ಅಭಿವೃದ್ಧಿ ಕುರಿತು ನಿರ್ಧರಿಸುವುದು;

(2) ಫಲಿತಾಂಶಗಳ ಪ್ರಾಯೋಗಿಕ (ಎಂಪಿರಿಕಲ್) ವಿಶ್ಲೇಷಣೆಯನ್ನು ಕೈಗೊಳ್ಳುವುದು ಮತ್ತು ಪ್ರತಿ ವರ್ಷ ಶಿಕ್ಷಣದ ಮಟ್ಟವನ್ನು ಸುಧಾರಿಸುವುದಕ್ಕಾಗಿ ಪ್ರಾರಂಭಿಸಬೇಕಾದ ಕ್ರಮಗಳ ಬಗ್ಗೆ ವಿದ್ಯಾವಿಷಯಕ ಪರಿಷತ್ತಿಗೆ ಶಿಫಾರಸ್ಸನ್ನು ಮಾಡುವುದು;

(3) ಸ್ವಾಯತ್ತ ಕಾಲೇಜುಗಳ ಶೈಕ್ಷಣಿಕ ಕಾರ್ಯಕ್ರಮಗಳನ್ನು ಪರೀಕ್ಷಿಸುವುದು ಮತ್ತು ಮೌಲ್ಯಮಾಪನ ಮಾಡುವುದು ಹಾಗೂ ಅಂಥ ಕಾಲೇಜುಗಳಿಗೆ ಮಾಹಿತಿಯನ್ನು ಒದಗಿಸುವುದು;

(4) ಸಂಯೋಜನಾ ಹಾಗೂ ಪರೀಕ್ಷಾ ಮಂಡಳಿಯ ಶಿಫಾರಸ್ಸುಗಳ ಮೇಲೆ ವಿಶ್ವವಿದ್ಯಾಲಯದ ವಿಶೇಷಾಧಿಕಾರಗಳಿಗೆ ಮತ್ತು ವಿಶೇಷಾಧಿಕಾರಗಳಿಂದ, ಕಾಲೇಜುಗಳ ಹಾಗೂ ಶೈಕ್ಷಣಿಕ ಸಂಸ್ಥೆಗಳ ಸಂಯೋಜನೆ ಮತ್ತು ಸಂಯೋಜನೆಯನ್ನು ಹಿಂತೆಗೆದುಕೊಳ್ಳುವ ವಿಷಯಗಳನ್ನು ಕುರಿತು ನಿರ್ಧರಿಸುವುದು.

(5) ಶಾಸನಗಳ ಮೂಲಕ ನಿಯಮಿಸಬಹುದಾದಂಥ ಯಾವುದೇ ಇತರ ಅಧಿಕಾರಗಳು, ಕರ್ತವ್ಯ ಗಳು, ಪ್ರಕಾರ್ಯಗಳು ಹಾಗೂ ಜವಾಬ್ದಾರಿಗಳು.

**37. ವ್ಯವಸ್ಥಾಪನಾ ಪರಿಷತ್ತಿನ ಸಭೆಗಳ ಕಾರ್ಯವಿಧಾನ.–** (1) ವ್ಯವಸ್ಥಾಪನಾ ಪರಿಷತ್ತು ಅವಶ್ಯಕವಿರಬಹುದಾದಷ್ಟು ಸಲ ಆದರೆ, ಒಂದು ಶೈಕ್ಷಣಿಕ ವರ್ಷದಲ್ಲಿ ಎರಡು ಸಲಕ್ಕಿಂತ ಕಡಿಮೆ ಇಲ್ಲದಂತೆ ಸಭೆ ಸೇರತಕ್ಕದ್ದು.

(2) ವ್ಯವಸ್ಥಾಪನಾ ಪರಿಷತ್ತಿನ ಸದಸ್ಯರ ಒಟ್ಟು ಸಂಖ್ಯೆಯ ಅರ್ಧ ಭಾಗದಷ್ಟು ಸಂಖ್ಯೆಯು ವಿದ್ಯಾವಿಷಯಕ ಪರಿಷತ್ತಿನ ಸಭೆಯ ಕೋರಂ ಆಗಿರತಕ್ಕದ್ದು.

(3) ಸದಸ್ಯರ ನಡುವೆ ಭಿನ್ನಾಭಿಪ್ರಾಯ ಉಂಟಾದ ಸಂದರ್ಭದಲ್ಲಿ, ಸದಸ್ಯರ ಬಹುಮತದ ಅಭಿಪ್ರಾಯವನ್ನು ಅಂಗೀಕರಿಸತಕ್ಕದ್ದು.

(4) ಚೇರ್‌ಮನ್‌ರವರು ಒಳಗೊಂಡಂತೆ ವ್ಯವಸ್ಥಾಪಾ ಪರಿಷತ್ತಿನ ಪ್ರತಿಯೊಬ್ಬ ಸದಸ್ಯರು ಒಂದೊಂದು ಮತವನ್ನು ಹೊಂದಿರತಕ್ಕದ್ದು ಮತ್ತು ವ್ಯವಸ್ಥಾಪನಾ ಪರಿಷತ್ತು ನಿರ್ಧರಿಸಬೇಕಾದ ಯಾವುದೇ ಪ್ರಶ್ನೆಯ ಮೇಲೆ ಮತಗಳು ಸಮಾನವಾಗಿ ಬಂದಲ್ಲಿ, ಚೇರ್‌ಮನ್‌ರವರು ಅಥವಾ ಸಂದರ್ಭಾನುಸಾರ ಸಭೆಯ ಅಧ್ಯಕ್ಷತೆಯನ್ನು ವಹಿಸಿದಂಥ ಸದಸ್ಯರು, ಹೆಚ್ಚುವರಿಯಾಗಿ ಒಂದು ನಿರ್ಣಾಯಕ ಮತವನ್ನು ಹೊಂದಿರತಕ್ಕದ್ದು.

(5) ವ್ಯವಸ್ಥಾಪನಾ ಪರಿಷತ್ತು ತುರ್ತು ಕ್ರಮಗಳನ್ನು ಕೈಗೊಳ್ಳುವ ಅವಶ್ಯಕತೆ ಕಂಡು ಬಂದಲ್ಲಿ, ಕಾಗದ ಪತ್ರಗಳನ್ನು ಸದಸ್ಯರಿಗೆ ಕಳುಹಿಸಿಕೊಡುವ ಮೂಲಕ ನಡೆಸಬೇಕಾದ ಕಾರ್ಯಕಲಾಪಗಳಿಗೆ ಚೇರ್‌ಮನ್‌ರವರು ಅನುಮತಿ ನೀಡಬಹುದು. ಕೈಗೊಳ್ಳಲು ಪ್ರಸ್ತಾಪಿಸಿದ ಕ್ರಮವನ್ನು ಸದಸ್ಯರು ಬಹುಮತದಿಂದ ಒಪ್ಪಿದ ಹೊರತು ಕೈಗೊಳ್ಳತಕ್ಕದ್ದಲ್ಲ. ಹಾಗೆ ಕೈಗೊಂಡ ಕ್ರಮವನ್ನು ಎಲ್ಲಾ ಸದಸ್ಯರಿಗೂ ತಕ್ಷಣ ತಿಳಿಸತಕ್ಕದ್ದು ಮತ್ತು ಕಾಗದ ಪತ್ರಗಳನ್ನು ಸ್ಥಿರೀಕರಣಕ್ಕಾಗಿ ವ್ಯವಸ್ಥಾಪನಾ ಪರಿಷತ್ತಿನ ಮುಂಬರುವ ಸಭೆಯ ಮುಂದೆ ಮಂಡಿಸತಕ್ಕದ್ದು.

**38. ಪದವನ್ನು ತೆರವು ಮಾಡುವುದು.–** (1) ಪದನಿಮಿತ್ತ ಸದಸ್ಯನನ್ನು ಹೊರತುಪಡಿಸಿ, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಯಾರೇ ಸದಸ್ಯನು ತನ್ನ ಪದಕ್ಕೆ ರಾಜೀನಾಮೆ ನೀಡಬಹುದು. ಸದಸ್ಯನು, ಸ್ವತ: ಕೈಯಿಂದ ಬರೆದ ರಾಜೀನಾಮೆ ಪತ್ರವನ್ನು ಕುಲಪತಿಯವರಿಗೆ ಕಳುಹಿಸಿಕೊಡತಕ್ಕದ್ದು. ರಾಜೀನಾಮೆ ಪತ್ರವನ್ನು ಅಂಗೀಕರಿಸಿದ ಮತ್ತು ಸಂಬಂಧಪಟ್ಟವರಿಗೆ ಅದನ್ನು ತಿಳಿಸಿದ ಕೂಡಲೇ ಅಂಥ ರಾಜೀನಾಮೆಯು ಜಾರಿಗೆ ಬರತಕ್ಕದ್ದು.

(2) ಒಂದು ನಿರ್ದಿಷ್ಟ ನಿಕಾಯದ ಸದಸ್ಯನಾಗಿ ಅಥವಾ ಅಧ್ಯಾಪಕನಾಗಿ ಅಥವಾ ಒಂದು ನಿರ್ದಿಷ್ಟ ನೇಮಕದ ಧಾರಕನೆಂದು ಸ್ಪಷ್ಟವಾಗಿ ಹೇಳಿರುವ ಆ ನಿರ್ದಿಷ್ಟ ಹುದ್ದೆಯ ಧಾರಕನಾಗಿ ತನ್ನ ಆ ಸಾಮರ್ಥ್ಯದಿಂದ ನಾಮ ನಿರ್ದೇಶಿತನಾಗಿರುವಂಥ ವಿಶ್ವವಿದ್ಯಾಲಯದ ಪ್ರಾಧಿಕಾರದ ಅಥವಾ ನಿಕಾಯದ ಯಾವೊಬ್ಬ ಸದಸ್ಯನು, ನಿರ್ದಿಷ್ಟ ನಿಕಾಯದ ಒಬ್ಬ ಸದಸ್ಯನಾಗಿರುವುದು ಅಥವಾ ಅಧ್ಯಾಪಕನಾಗಿರುವುದು ಅಥವಾ ಆ ನಿರ್ದಿಷ್ಟ ನೇಮಕವನ್ನು ಹೊಂದಿರುವುದು ನಿಂತು ಹೋದ ತರುವಾಯ ವಿಶ್ವವಿದ್ಯಾಲಯದ ಪ್ರಾಧಿಕಾರದ ಅಥವಾ ನಿಕಾಯದ ಸದಸ್ಯನಾಗಿ ಮುಂದುವರಿಯತಕ್ಕದ್ದಲ್ಲ:

ಪರಂತು, ವಯೋನಿವೃತ್ತಿ ಹೊಂದಿದಂಥ ಅಧ್ಯಾಪಕರು ಶೈಕ್ಷಣಿಕ ವರ್ಷದ ಕೊನೆಯವರೆಗೆ ಮರು ನಿಯೋಜನೆಯ ಆಧಾರದ ಮೇಲೆ ಮುಂದುವರೆದಿದ್ದರೆ, ಅಂಥ ಪ್ರಾಧಿಕಾರದ ಅಥವಾ ನಿಕಾಯದ ಸದಸ್ಯತ್ವವು ಅವರ ವಯೋನಿವೃತ್ತಿಯ ದಿನಾಂಕದಿಂದ ನಿಂತುಹೋಗತಕ್ಕದ್ದು.

(3) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಸದಸ್ಯನು, ನೈತಿಕ ಅಧ:ಪತನವನ್ನು ಒಳಗೊಂಡ ಯಾವುದೇ ಅಪರಾಧಕ್ಕಾಗಿ ನ್ಯಾಯಾಲಯದಿಂದ ಅಪರಾಧಿ ಎಂದು ನೀರ್ಣೀತನಾದಾಗ ಅವನು ಸದಸ್ಯನಾಗಿರುವುದು ನಿಂತು ಹೋಗತಕ್ಕದ್ದು.

**39. ಖಾಲಿ ಸ್ಥಾನಗಳನ್ನು ಭರ್ತಿ ಮಾಡುವುದು.–** ವಿಶ್ವ ವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ಇತರ ನಿಕಾಯದ ಪದನಿಮಿತ್ತ ಸದಸ್ಯರಲ್ಲದ ಸದಸ್ಯರ ಮರಣ, ರಾಜೀನಾಮೆ, ತೆಗೆದುಹಾಕುವಿಕೆ ಅಥವಾ ಅನ್ಯಥಾ ಕಾರಣದಿಂದ ಉಂಟಾಗುವ ಎಲ್ಲ ಖಾಲಿ ಸ್ಥಾನಗಳನ್ನು, ಯಾವ ಸದಸ್ಯನ ಸ್ಥಾನವು ಖಾಲಿ ಆಗಿದೆಯೋ ಆ ಸದಸ್ಯನನ್ನು ನಾಮ ನಿರ್ದೇಶನ ಮಾಡಿದ ವ್ಯಕ್ತಿ ಅಥವಾ ನಿಕಾಯವು, ಆದಷ್ಟು ಬೇಗನೆ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ನೇಮಕಗೊಂಡ ವ್ಯಕ್ತಿಯು, ಯಾವ ವ್ಯಕ್ತಿಯ ಸ್ಥಾನದಲ್ಲಿ ಭರ್ತಿಗೊಂಡಿರುವನೋ ಆ ವ್ಯಕ್ತಿಯು ಸದಸ್ಯನಾಗಿ ಅನ್ಯಥಾ ಮುಂದುವರಿಯಬಹುದಾಗಿದ್ದ ಉಳಿದ ಅವಧಿಯವರೆಗೆ ಅಂಥ ಪ್ರಾಧಿಕಾರದ ಅಥವಾ ನಿಕಾಯದ ಸದಸ್ಯನಾಗಿರತಕ್ಕದ್ದು:

ಪರಂತು, ಅಂಥ ಖಾಲಿ ಸ್ಥಾನವನ್ನು ಮೇಲೆ ಹೇಳಿದ ರೀತಿಯಲ್ಲಿ ಭರ್ತಿ ಮಾಡುವುದಕ್ಕಾಗಿ ಯಾರೇ ವ್ಯಕ್ತಿಯ ನಾಮನಿರ್ದೇಶನ ಮಾಡುವುದು ಇತ್ಯರ್ಥದಲ್ಲಿರುವಾಗ, ಆ ನಾಮನಿರ್ದೇಶನ ಮಾಡಿದ ವ್ಯಕ್ತಿ ಅಥವಾ ನಿಕಾಯವು, ಅಧಿನಿಯಮದ ಈ ಉಪಬಂಧಗಳ ಅಡಿಯಲ್ಲಿ ಅಂಥ ಖಾಲಿ ಸ್ಥಾನವನ್ನು ಅರ್ಹತೆಯುಳ್ಳ ವ್ಯಕ್ತಿಯೊಬ್ಬರನ್ನು ನಾಮನಿರ್ದೇಶನ ಮಾಡುವ ಮೂಲಕ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ನಾಮ ನಿರ್ದೇಶಿತನಾದ ಯಾವೊಬ್ಬ ವ್ಯಕ್ತಿಯು, ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಅದಕ್ಕೆ ನಾಮನಿರ್ದೇಶನಗೊಳ್ಳುವವರೆಗೆ ಅಂಥ ಪ್ರಾಧಿಕಾರದ ಅಥವಾ ನಿಕಾಯದ ಸದಸ್ಯನಾಗಿ ಪದಧಾರಣ ಮಾಡತಕ್ಕದ್ದು.

## ಅಧ್ಯಾಯ – *V*

## ಶಾಸನಗಳು, ವಿನಿಯಮಗಳು ಮತ್ತು ನಿಯಮಗಳು

**40. ಶಾಸನಗಳು.–** (1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಶಾಸನಗಳು ಈ ಮುಂದಿನ ಎಲ್ಲಾ ಅಥವಾ ಯಾವುದೇ ವಿಷಯಗಳಿಗಾಗಿ ಉಪಬಂಧ ಕಲ್ಪಿಸಬಹುದು, ಎಂದರೆ:–

(ಎ) ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳ ಮತ್ತು ಕಾಲಕಾಲಕ್ಕೆ ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ರಚಿಸಬಹುದಾದಂಥ ಇತರ ನಿಕಾಯಗಳ ರಚನೆ, ಪ್ರಕಾರ್ಯಗಳು ಮತ್ತು ಅಧಿಕಾರಗಳು;

(ಬಿ) ಪ್ರಥಮ ಸದಸ್ಯರು ಪದದಲ್ಲಿ ಮುಂದುವರಿಯುವುದೂ ಒಳಗೊಂಡಂತೆ, ಸದರಿ ಪ್ರಾಧಿಕಾರಗಳ ಅಥವಾ ನಿಕಾಯಗಳ ಸದಸ್ಯರ ಚುನಾವಣೆ ಮತ್ತು ಅವರು ಪದದಲ್ಲಿ ಮುಂದುವರೆಯುವುದು ಹಾಗೂ ಸದಸ್ಯರ ಖಾಲಿ ಸ್ಥಾನಗಳನ್ನು ತುಂಬುವುದು ಮತ್ತು ಪ್ರಾಧಿಕಾರಗಳಿಗೆ ಅಥವಾ ನಿಕಾಯಗಳಿಗೆ ಸಂಬಂಧಪಟ್ಟಂತೆ ಯಾವ ವಿಷಯಗಳಿಗಾಗಿ ಉಪಬಂಧಿಸುವುದು ಅವಶ್ಯವಾಗಬಹುದೋ ಅಥವಾ ಅಪೇಕ್ಷಣೀಯವಾಗಬಹುದೋ ಆ ಎಲ್ಲಾ ಇತರ ವಿಷಯಗಳ ಬಗ್ಗೆ ಉಪಬಂಧಿಸುವುದು;

(ಸಿ) ವಿಶ್ವವಿದ್ಯಾಲಯದ ಪದ್ಧತಿಗಳ ಅಧಿಕಾರಿಗಳ ನೇಮಕಾತಿ, ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ಅವರ ಉಪಲಬ್ಧಿಗಳು ಮತ್ತು ಇತರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು;

(ಡಿ) ವಿಶ್ವವಿದ್ಯಾಲಯದ ಅಧ್ಯಾಪಕರ ಮತ್ತು ಇತರ ಶೈಕ್ಷಣಿಕ ಸಿಬ್ಬಂದಿಯ ನೇಮಕಾತಿ ಹಾಗೂ ಅವರ ಉಪಲಬ್ಧಿಗಳು ಮತ್ತು ಇತರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು;

(ಇ) ಜಂಟಿ ಯೋಜನೆಯನ್ನು ಕೈಗೊಳ್ಳುವುದಕ್ಕಾಗಿ, ಒಂದು ನಿರ್ದಿಷ್ಟ ಅವಧಿಗಾಗಿ ಯಾವುದೇ ಇತರ ವಿಶ್ವವಿದ್ಯಾಲಯದಲ್ಲಿ ಅಥವಾ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧ್ಯಾಪಕರ ಮತ್ತು ಇತರ ಶೈಕ್ಷಣಿಕ ಸಿಬ್ಬಂದಿಯ ನೇಮಕಾತಿ;

(ಎಫ್) ನಿವೃತ್ತಿ ವೇತನ, ವಿಮೆ ಮತ್ತು ಭವಿಷ್ಯನಿಧಿ ಒಳಗೊಂಡಂತೆ ಸೇವಾ ಷರತ್ತುಗಳು, ಸೇವೆಯನ್ನು ಕೊನೆಗೊಳಿಸುವ ವಿಧಾನ ಮತ್ತು ಶಿಸ್ತು ಕ್ರಮ;

(ಜಿ) ನೌಕರರ ಸೇವಾ ಜೇಷ್ಠತೆಯನ್ನು ನಿಯಂತ್ರಿಸುವ ತತ್ವಗಳು;

(ಎಚ್)ನೌಕರರ ಅಥವಾ ವಿದ್ಯಾರ್ಥಿಗಳ ಮತ್ತು ವಿಶ್ವವಿದ್ಯಾಲಯದ ನಡುವೆ ವಿವಾದ ಉಂಟಾದ ಸಂದರ್ಭಗಳಲ್ಲಿ ಮಧ್ಯಸ್ಥಿಕೆಗಾಗಿ ಕಾರ್ಯವಿಧಾನ;

(ಐ) ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿ ಅಥವಾ ಪ್ರಾಧಿಕಾರದ ಕ್ರಮದ ವಿರುದ್ಧ ಯಾವೊಬ್ಬ ನೌಕರನು ಅಥವಾ ವಿದ್ಯಾರ್ಥಿಯು ಪ್ರಬಂಧಕ ಮಂಡಳಿಗೆ ಅಪೀಲು ಸಲ್ಲಿಸುವುದಕ್ಕಾಗಿ ಕಾರ್ಯವಿಧಾನ;

(ಜೆ) ವಿದ್ಯಾರ್ಥಿಗಳ ಒಕ್ಕೂಟ ಅಥವಾ ಅಧ್ಯಾಪಕರ, ಶೈಕ್ಷಣಿಕ ಸಿಬ್ಬಂದಿಯ ಅಥವಾ ಇತರ ನೌಕರರ ಸಂಘಗಳ ಸ್ಥಾಪನೆ ಮತ್ತು ಮಾನ್ಯತೆ;

(ಕೆ) ವಿಶ್ವವಿದ್ಯಾಲಯದ ವ್ಯವಹಾರಗಳಲ್ಲಿ ವಿದ್ಯಾರ್ಥಿಗಳ ಭಾಗವಹಿಸುವಿಕೆ;

(ಎಲ್)ಗೌರವ ಪದವಿಗಳನ್ನು ಪ್ರದಾನ ಮಾಡುವುದು;

(ಎಂ) ಪದವಿಗಳು ಮತ್ತು ಡಿಪ್ಲೊಮೋಗಳನ್ನು ಪ್ರದಾನ ಮಾಡುವುದಕ್ಕಾಗಿ ಘಟಿಕೋತ್ಸವಗಳನ್ನು ನಡೆಸುವುದು ಮತ್ತು ತುರ್ತು ಸಂದರ್ಭದಲ್ಲಿ ಘಟಿಕೋತ್ಸವಕ್ಕೆ ಮೊದಲು, ಪದವಿ ಪ್ರಮಾಣ ಪತ್ರಗಳನ್ನು ನೀಡುವುದು;

(ಎನ್) ಪದವಿಗಳು, ಡಿಪ್ಲೋಮೊಗಳು, ಸರ್ಟಿಫಿಕೇಟುಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಹಿಂತೆಗೆದುಕೊಳ್ಳುವುದು;

(ಓ) ವಿದ್ಯಾಲಯಗಳು, ಕೇಂದ್ರಗಳು, ವಿದ್ಯಾರ್ಥಿನಿಲಯಗಳು, ಕಾಲೇಜುಗಳು ಮತ್ತು ಸಂಸ್ಥೆಗಳನ್ನು ಸ್ಥಾಪಿಸುವುದು, ನಿರ್ವಹಣೆ ಮಾಡುವುದು ಮತ್ತು ರದ್ದುಗೊಳಿಸುವುದು;

(ಪಿ) ಕಾಲೇಜುಗಳ ಸಂಯೋಜನೆಗಾಗಿ ಷರತ್ತುಗಳು, ಸಂಶೋಧನಾ ಕೇಂದ್ರಗಳಿಗೆ/ಸಂಸ್ಥೆಗಳಿಗೆ ಮಾನ್ಯತೆಯನ್ನು ನೀಡುವುದು ಮತ್ತು ಅಂಥ ಸಂಯೋಜನೆ ಅಥವಾ ಮಾನ್ಯತೆಯನ್ನು ಹಿಂತೆಗೆದುಕೊಳ್ಳುವುದು;

(ಕ್ಯೂ) ವಿದ್ಯಾಲಯ, ಕೇಂದ್ರ, ಕಾಲೇಜು ಅಥವಾ ಸಂಸ್ಥೆಗೆ ಇರಬಹುದಾದ ಸ್ವಾಯತ್ತತೆಯ ವ್ಯಾಪ್ತಿ ಮತ್ತು ಅಂಥ ಸ್ವಾಯತ್ತತೆಯನ್ನು ಚಲಾಯಿಸುವುದಕ್ಕೆ ಸಂಬಂಧಿಸಿದ ವಿಷಯಗಳು;

(ಆರ್)ಸಂಶೋಧಾನಾ ವೇತನಗಳು, ವಿದ್ಯಾರ್ಥಿ ವೇತನಗಳು, ಸಹಾಯಕ ವೇತನಗಳು, ಶಿಷ್ಯ ವೇತನಗಳು, ಪ್ರವೇತನಗಳು (ಎಕ್ಸಿಬಿಷನ್‌ಗಳು), ಪದಕಗಳು ಮತ್ತು ಬಹುಮಾನಗಳನ್ನು ಪ್ರಾರಂಭಿಸುವುದು;

(ಎಸ್)ಪ್ರಾಧ್ಯಾಪಕರ, ಸಹಪ್ರಾಧ್ಯಾಪಕರ, ಸಹಾಯಕ ಪ್ರಾಧ್ಯಾಪಕರ ಮತ್ತು ಅಂಥ ಇತರ ಬೋಧಕ ಹುದ್ದೆಗಳನ್ನು ಸೃಜನೆ ಮಾಡುವುದು, ಮರು ನಿಯೋಜನೆಗೊಳಿಸುವುದು, ಅಮಾನತ್ತು ಮಾಡುವುದು ಅಥವಾ ರದ್ದುಗೊಳಿಸುವುದು;

(ಟಿ) ಆಡಳಿತಾತ್ಮಕ, ತಾಂತ್ರಿಕ, ಲಿಪಿಕ ಮತ್ತು ಅಂಥ ಇತರ ಬೋಧಕೇತರ ಹುದ್ದೆಗಳನ್ನು ಸೃಜನೆ ಮಾಡುವುದು, ಮರು ನಿಯೋಜನೆಗೊಳಿಸುವುದು, ಅಮಾನತ್ತು ಮಾಡುವುದು ಅಥವಾ ರದ್ದುಗೊಳಿಸುವುದು;

(ಯು) ಸರ್ಕಾರದ ಮೀಸಲಾತಿ ಕಾರ್ಯನೀತಿಗೊಳಪಟ್ಟು ವಿಶ್ವವಿದ್ಯಾಲಯದಲ್ಲಿನ ಅಧ್ಯಾಪಕರ, ಬೋಧಕೇತರ ಸಿಬ್ಬಂದಿಯ ನೇಮಕಾತಿ ವಿಧಾನಗಳು;

(ವಿ) ಮರಣ ಶಾಸನ ದಾನ, ದೇಣಿಗೆಗಳು ಮತ್ತು ದತ್ತಿಗಳ ಸ್ವೀಕಾರ ಮತ್ತು ನಿರ್ವಹಣೆ;

(ಡಬ್ಲ್ಯೂ)ವಿಶ್ವವಿದ್ಯಾಲಯವು ಸಲ್ಲಿಸಿದ ಸೇವೆಗಳಿಗಾಗಿ ವಿಧಿಸಬೇಕಾದ ಫೀಜುಗಳು, ಹಾಗೆಯೇ ಮಾನ್ಯತೆ ಪಡೆದ ಸಂಸ್ಥೆಗಳು ಪಾವತಿಸಬೇಕಾದ ನೋಂದಣಿ ಮತ್ತು ಇತರೆ ಫೀಜು;

(ಎಕ್ಸ್) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಿವಾಸಗಳ ಸ್ಥಿತಿಗತಿಗಳು;

(ವೈ) ವಿಶ್ವವಿದ್ಯಾಲಯದಲ್ಲಿ ಮತ್ತು ಸಂಯೋಜಿತ ಕಾಲೇಜುಗಳಲ್ಲಿ ಮತ್ತು ಇತರ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳ ಆರೋಗ್ಯ ಮತ್ತು ಶಿಸ್ತು ಹಾಗೂ ಅವರ ವಿರುದ್ಧದ ಶಿಸ್ತು ವ್ಯವಹರಣೆಗಳು;

(ಜೆಡ್) ಅಧ್ಯಯನ ಕೇಂದ್ರಗಳ, ಅಧ್ಯಯನ ಮಂಡಳಿಗಳ, ವಿಶೇಷ ಕೇಂದ್ರಗಳ, ವಿಶೇಷ ಪ್ರಯೋಗಾಲಯಗಳ ಮತ್ತು ಇತರ ಸಮಿತಿಗಳ ಸ್ಥಾಪನೆ;

(ಎಎ) ಉನ್ನತ ಕಲಿಕೆಗಾಗಿ ಸಂಸ್ಥೆಗಳ ಮಾನ್ಯತೆಗಾಗಿ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಅದನ್ನು ಹಿಂತೆಗೆದುಕೊಳ್ಳುವುದು;

(ಎಬಿ) ಯಾವುದೇ ಮಾನ್ಯತೆ ಪಡೆದ ಸಂಸ್ಥೆ ಅಥವಾ ವಿಶ್ವವಿದ್ಯಾಲಯದೊಂದಿಗೆ ಸಹವರ್ತಿಯಾಗಿರುವ ಯಾವುದೇ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕರೆಂದು ಮಾನ್ಯತೆ ಮಾಡಬಹುದಾದ ವ್ಯಕ್ತಿಗಳ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಅಂಥ ಮಾನ್ಯತೆಯನ್ನು ಹಿಂತೆಗೆದುಕೊಳ್ಳುವುದು;

(ಎಸಿ) ಇತರ ವಿಶ್ವವಿದ್ಯಾಲಯಗಳು, ಉನ್ನತ ಕಲಿಕೆಯ ಪ್ರಾಧಿಕಾರಗಳು ಅಥವಾ ಸಂಸ್ಥೆಗಳೊಂದಿಗೆ ಸಹಕರಿಸುವ ಅಥವಾ ಸಹಯೋಗ ಅಥವಾ ಸಹವರ್ತಿಸುವ ವಿಧಾನ;

(ಎಡಿ) ವಿದ್ಯಾರ್ಥಿನಿಯರಿಗಾಗಿ ನಿವಾಸ, ಶಿಸ್ತು ಮತ್ತು ಬೋಧನೆಗಾಗಿ ಮಾಡಬಹುದಾದ ಯಾವುದಾದರೂ ವಿಶೇಷ ಏರ್ಪಾಡುಗಳಿದ್ದಲ್ಲಿ, ಅವುಗಳು ಮತ್ತು ಅವರಿಗಾಗಿ ಅಧ್ಯಯನ ವ್ಯಾಸಂಗ ಕ್ರಮಗಳನ್ನು ನಿಯಮಿಸುವುದು;

(ಎಇ) ಈ ಅಧಿನಿಯಮದ ಮೂಲಕ ಅಥವಾ ಶಾಸನಗಳ ಮೂಲಕ ಉಪಬಂಧ ಕಲ್ಪಿಸಬಹುದಾದ ಎಲ್ಲಾ ಇತರ ವಿಷಯಗಳು.

**41. ಶಾಸನಗಳನ್ನು ಅಧಿನಿಯಮಿಸುವುದು ಮತ್ತು ಅವುಗಳ ರಚನೆ.–** (1) ಮೊದಲನೆಯ ಶಾಸನಗಳು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದಂತೆ ಇರತಕ್ಕದ್ದು.

(2) ಪ್ರಬಂಧಕ ಮಂಡಳಿಯು (1)ನೇ ಉಪ ಪ್ರಕರಣದಲ್ಲಿ ಇನ್ನು ಮುಂದೆ ಉಪಬಂಧಿಸಿದ ವಿಧಾನದಲ್ಲಿ ಉಲ್ಲೇಖಿಸಿದಂಥವುಗಳು ಒಳಗೊಂಡಂತೆ ಕಾಲಕಾಲಕ್ಕೆ ಹೊಸ ಅಥವಾ ಹೆಚ್ಚುವರಿ ಶಾಸನಗಳನ್ನು ರಚಿಸಬಹುದು ಅಥವಾ ಅವುಗಳನ್ನು ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು:

ಪರಂತು, ಪ್ರಬಂಧಕ ಮಂಡಳಿಯು, ವಿಶ್ವವಿದ್ಯಾಲಯದ ಯಾವುವೇ ಸ್ಥಾನಮಾನಗಳಿಗೆ, ಅಧಿಕಾರಗಳಿಗೆ ಅಥವಾ ಪ್ರಾಧಿಕಾರದ ರಚನೆಗೆ ಬಾಧಕವಾಗುವ ಯಾವುವೇ ಶಾಸನಗಳ ರಚನೆ, ತಿದ್ದುಪಡಿಯನ್ನು ಅಥವಾ ನಿರಸನವನ್ನು, ಅಂಥ ಪ್ರಾಧಿಕಾರವು ಪ್ರಸ್ತಾವಿತ ಬದಲಾವಣೆಗಳನ್ನು ಕುರಿತಂತೆ ಲಿಖಿತದಲ್ಲಿ ತನ್ನ ಅಭಿಪ್ರಾಯವನ್ನು ಹೇಳಿಕೊಳ್ಳಲು ಅದಕ್ಕೆ ಅವಕಾಶವನ್ನು ನೀಡದೇ ಮತ್ತು ಹಾಗೆ ವ್ಯಕ್ತಪಡಿಸಿದ ಅಭಿಪ್ರಾಯವನ್ನು ಪ್ರಬಂಧಕ ಮಂಡಳಿಯು ಪರಿಗಣಿಸದೆ ಮಾಡತಕ್ಕದ್ದಲ್ಲ.

(3) ಪ್ರಬಂಧಕ ಮಂಡಳಿಯು, ಏಕೀಕೃತ ಪದ್ಧತಿಯ ಹಾಗೂ ಸಂದರ್ಭಾನುಸಾರವಾಗಿ ಸಂಯೋಜನಾ ಪದ್ಧತಿಯ ಸಂಬಂಧದಲ್ಲಿ ತಾನಾಗಿಯೇ ಆಗಲಿ ಅಥವಾ ವಿದ್ಯಾವಿಷಯಕ ಪರಿಷತ್ತು ಅಥವಾ ವ್ಯವಸ್ಥಾಪನಾ ಪರಿಷತ್ತು ಮಾಡಿದ ಪ್ರಸ್ತಾವದ ಮೇಲಾಗಲೀ ಶಾಸನದ ಕರಡನ್ನು ಅನುಕ್ರಮವಾಗಿ ಪರಿಗಣನೆಗೆ ತೆಗೆದುಕೊಳ್ಳಬಹುದು. ವಿದ್ಯಾವಿಷಯಕ ಪರಿಷತ್ತು ಅಥವಾ ವ್ಯವಸ್ಥಾಪನಾ ಪರಿಷತ್ತು, ಕರಡನ್ನು ಪ್ರಸ್ತಾವಿಸದೇ ಇದ್ದಲ್ಲಿ ಮತ್ತು ಒಳಗೊಂಡ ವಿಷಯವು ವಿದ್ಯಾವಿಷಯಕ ಪರಿಷತ್ತಿನ ಅಥವಾ ಸಂದರ್ಭಾನುಸಾರವಾಗಿ ವ್ಯವಸ್ಥಾಪನಾ ಪರಿಷತ್ತಿನ ವ್ಯಾಪ್ತಿಯೊಳಗೆ ಬಂದಲ್ಲಿ, ಪ್ರಬಂಧಕ ಮಂಡಳಿಯು ಸಂಬಂಧಪಟ್ಟ ಪರಿಷತ್ತಿನ ಅಭಿಪ್ರಾಯವನ್ನು ಕೋರತಕ್ಕದ್ದು.

(4) ಪ್ರಬಂಧಕ ಮಂಡಳಿಯು, ಹಣಕಾಸಿನ ತೊಡಕುಗಳನ್ನು ಒಳಗೊಂಡ ಶಾಸನಗಳ ಸಂಬಂಧದಲ್ಲಿ, ಲೆಕ್ಕಪರಿಶೋಧನಾ ಹಾಗೂ ಹಣಕಾಸು ಪರಿಷತ್ತಿನ ಅಭಿಪ್ರಾಯವನ್ನು ಪಡೆಯತಕ್ಕದ್ದು.

(5) ಪ್ರಬಂಧಕ ಮಂಡಳಿಯು, ಕರಡು ಶಾಸನಗಳ ಸಂಬಂಧದಲ್ಲಿ ಅವುಗಳನ್ನು ಪರಿಗಣನೆಗೆ ತೆಗೆದುಕೊಳ್ಳುವುದಕ್ಕೆ ಮೊದಲು, ತಾನು ಅವಶ್ಯವೆಂದು ಭಾವಿಸಿದಲ್ಲಿ, ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿಯ, ಪ್ರಾಧಿಕಾರದ ಅಥವಾ ನಿಕಾಯದ ಅಭಿಪ್ರಾಯವನ್ನು ಸಹ ಪಡೆಯಬಹುದು.

(6) ರಚಿಸಿದ ಪ್ರತಿಯೊಂದು ಶಾಸನ ಅಥವಾ ಯಾವುದೇ ಶಾಸನದ ತಿದ್ದುಪಡಿ ಅಥವಾ ನಿರಸನಕ್ಕೆ ಅಧ್ಯಕ್ಷರ ಅನುಮೋದನೆಯು ಅಗತ್ಯವಾಗಿದೆ.

(7) ಒಂದು ಹೊಸ ಶಾಸನ ಅಥವಾ ಜಾರಿಯಲ್ಲಿರುವ ಶಾಸನವನ್ನು ತಿದ್ದುಪಡಿ ಮಾಡುವ ಅಥವಾ ನಿರಸನಗೊಳಿಸುವ ಶಾಸನವು ಅಧ್ಯಕ್ಷರ ಅನುಮೋದನೆ ಪಡೆಯದ ಹೊರತು ಸಿಂಧುವಾಗತಕ್ಕದ್ದಲ್ಲ.

(8) ಅಧ್ಯಕ್ಷರು ನಿರ್ದೇಶಿಸಬಹುದಾದಂಥ ದಿನಾಂಕದಿಂದ ಶಾಸನಗಳು ಜಾರಿಗೆ ಬರತಕ್ಕದ್ದು.

(9) ಈ ಮೇಲಿನ ಉಪ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಅಧ್ಯಕ್ಷರು, ಈ ಅಧಿನಿಯಮವು ಪ್ರಾರಂಭವಾದ ನಿಕಟ ತರುವಾಯದ ಮೂರು ವರ್ಷಗಳ ಅವಧಿಯಲ್ಲಿ, (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಶಾಸನಗಳನ್ನು ಹೊಸದಾಗಿ ಅಥವಾ ಹೆಚ್ಚುವರಿಯಾಗಿ ರಚಿಸಬಹುದು ಅಥವಾ ಶಾಸನಗಳನ್ನು ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

**42. ವಿನಿಯಮಗಳು.–** (1) ಏಕೀಕೃತ ಪದ್ಧತಿಯ ಸಂಬಂಧದಲ್ಲಿ ವಿದ್ಯಾವಿಷಯಕ ಪರಿಷತ್ತು ಮತ್ತು ಸಂಯೋಜನಾ ಪದ್ಧತಿಯ ಸಂಬಂಧದಲ್ಲಿ ವ್ಯವಸ್ಥಾಪನಾ ಪರಿಷತ್ತು, ಈ ಅಧಿನಿಯಮಕ್ಕೆ ಸುಸಂಗತವಾಗಿರುವ ವಿನಿಯಮಗಳನ್ನು ಮತ್ತು ಈ ಅಧಿನಿಯಮದಲ್ಲಿ ನಮೂದಿಸಲಾದ ಎಲ್ಲಾ ಅಥವಾ ಯಾವುವೇ ಅಧಿಕಾರಗಳನ್ನು ಚಲಾಯಿಸುವುದಕ್ಕಾಗಿ ಮತ್ತು ವಿಶೇಷವಾಗಿ ಈ ಮುಂದಿನ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸುವುದಕ್ಕಾಗಿ ಶಾಸನಗಳನ್ನು ರಚಿಸಬಹುದು, ಎಂದರೆ:–

(ಎ) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಿ ಹಾಗೆಂದು ದಾಖಲಾತಿ ಪಟ್ಟಿಯಲ್ಲಿ ಸೇರಿಸುವುದು;

(ಬಿ) ವಿಶ್ವವಿದ್ಯಾಲಯದ ಎಲ್ಲಾ ಪದವಿಗಳು, ಡಿಪ್ಲೊಮೊಗಳಿಗೆ ಮತ್ತು ಪ್ರಮಾಣ ಪತ್ರಗಳಿಗಾಗಿ ಅಧ್ಯಯನ ವ್ಯಾಸಂಗ ಕ್ರಮಗಳು;

(ಸಿ) ಪದವಿಗಳು, ಡಿಪ್ಲೋಮೊಗಳು, ಪ್ರಮಾಣಪತ್ರಗಳು ಹಾಗೂ ಇತರೆ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು, ಇವುಗಳಿಗೆ ವಿದ್ಯಾರ್ಹತೆ ಮತ್ತು ಅವುಗಳನ್ನು ನೀಡಲು ಹಾಗೂ ಪಡೆಯಲು ಸಂಬಂಧಿಸಿದಂತೆ ತೆಗೆದುಕೊಳ್ಳಬೇಕಾದ ಕ್ರಮಗಳು;

(ಡಿ) ವಿಶ್ವವಿದ್ಯಾಲಯದಲ್ಲಿ ಹಾಗೂ ಸಂಯೋಜಿತ ಕಾಲೇಜುಗಳಲ್ಲಿ ಅಧ್ಯಯನದ ವ್ಯಾಸಂಗ ಕ್ರಮಗಳಿಗಾಗಿ ಮತ್ತು ವಿಶ್ವವಿದ್ಯಾಲಯದ ಪರೀಕ್ಷೆಗಳು, ಪದವಿಗಳು ಹಾಗೂ ಡಿಪ್ಲೊಮೊಗಳ ಪ್ರವೇಶಕ್ಕಾಗಿ ವಿಧಿಸಬೇಕಾದ ಶುಲ್ಕಗಳು;

(ಇ) ಸಂಶೋಧನಾ ವೇತನ (ಫೆಲೋಶಿಪ್), ವಿದ್ಯಾರ್ಥಿ ವೇತನ, ಶಿಷ್ಯವೇತನ, ಪ್ರವೇತನಗಳು (ಎಗ್ಸಿಬಿಷನ್), ಪದಕಗಳು ಮತ್ತು ಬಹುಮಾನಗಳನ್ನು ನೀಡುವ ಸಂಬಂಧದಲ್ಲಿ ಷರತ್ತುಗಳು;

(ಎಫ್) ಪರೀಕ್ಷಾ ಮಂಡಳಿಗಳ, ಪರೀಕ್ಷಕರ ಹಾಗೂ ಮಾಡರೇಟರ್‌ಗಳ ಪದಾವಧಿ ಮತ್ತು ಕರ್ತವ್ಯಗಳು ಒಳಗೊಂಡಂತೆ ಪರೀಕ್ಷೆಯನ್ನು ನಡೆಸುವುದು.

(ಜಿ) ಧಾರ್ಮಿಕ ಬೋಧನೆಗಳನ್ನು ನೀಡುವುದನ್ನು ನಿಯಂತ್ರಿಸುವುದು;

(ಹೆಚ್)ಇತರ ವಿಶ್ವವಿದ್ಯಾಲಯಗಳ ಪರೀಕ್ಷೆಗಳು ಮತ್ತು ಪದವಿಗಳನ್ನು ವಿಶ್ವವಿದ್ಯಾಲಯದ ಪರೀಕ್ಷೆ ಮತ್ತು ಪದವಿಗಳಿಗೆ ಸಮನಾದುವೆಂದು ಮಾನ್ಯತೆಯನ್ನು ನೀಡುವುದು;

(ಐ) ವಿಶ್ವವಿದ್ಯಾಲಯದ ವ್ಯಾಸಂಗ ಕ್ರಮಗಳು ಮತ್ತು ಪರೀಕ್ಷೆಗಳು ಹಾಗೂ ವಿಶ್ವವಿದ್ಯಾಲಯದ ಅಥವಾ ಸಂಯೋಜಿತ ಕಾಲೇಜುಗಳ ಅಥವಾ ಇತರ ವಿಶ್ವವಿದ್ಯಾಲಯದ ಸಂಸ್ಥೆಗಳ ವಿದ್ಯಾರ್ಥಿಗಳನ್ನು ಯಾವ ಷರತ್ತುಗಳ ಮೇಲೆ ವಿಶ್ವವಿದ್ಯಾಲಯದ ಪರೀಕ್ಷೆಗಳು ಅಥವಾ ಪದವಿಗಳು ಡಿಪ್ಲೊಮೊಗಳು ಮತ್ತು ಇತರ ಸರ್ಟಿಫಿಕೇಟು ಕೋರ್ಸುಗಳಿಗೆ ಸೇರಿಸಿಕೊಳ್ಳತಕ್ಕದ್ದೋ, ಆ ಷರತ್ತುಗಳು;

(ಜೆ) ವಿದ್ಯಾರ್ಥಿಗಳ ವರ್ಗಾವಣೆಯ ಸಂಬಂಧದಲ್ಲಿ, ಶಾಲೆಗಳು, ಕೇಂದ್ರಗಳು, ಕಾಲೇಜುಗಳು ಮತ್ತು ಮಾನ್ಯತೆ ಪಡೆದ ಸಂಸ್ಥೆಗಳು ಅನುಸರಿಸಬೇಕಾದ ಹಾಗೂ ಜಾರಿಗೊಳಿಸಬೇಕಾದ ನಿಯಮಗಳು;

(ಕೆ) ವಿನಾಯತಿಗಳನ್ನು ನೀಡುವುದು;

(2) ವಿದ್ಯಾವಿಷಯಕ ಪರಿಷತ್ತು ಅಥವಾ ವ್ಯವಸ್ಥಾಪನಾ ಪರಿಷತ್ತು ಅಂಗೀಕರಿಸಿದ ಎಲ್ಲಾ ವಿನಿಯಮಗಳನ್ನು ಅವುಗಳ ಅನುಮೋದನೆಗಾಗಿ ಪ್ರಬಂಧಕ ಮಂಡಳಿಗೆ ಕಳುಹಿಸತಕ್ಕದ್ದು. ಪ್ರಬಂಧಕ ಮಂಡಳಿಯು ವಿದ್ಯಾವಿಷಯಕ ಪರಿಷತ್ತಿನಿಂದ ಅಥವಾ ವ್ಯವಸ್ಥಾಪನಾ ಪರಿಷತ್ತಿನಿಂದ ವಿನಿಯಮಗಳನ್ನು ಸ್ವೀಕರಿಸಿದ ದಿನದಿಂದ ಒಂದು ತಿಂಗಳೊಳಗೆ ಅವುಗಳನ್ನು ಅನುಮೋದಿಸಬಹುದು ಅಥವಾ ಅವುಗಳನ್ನು ವಿದ್ಯಾವಿಷಯಕ ಪರಿಷತ್ತಿಗೆ ಅಥವಾ ವ್ಯವಸ್ಥಾಪನಾ ಪರಿಷತ್ತಿಗೆ ಹೆಚ್ಚಿನ ಪರಿಗಣನೆಗಾಗಿ ಹಿಂತಿರುಗಿಸಬಹುದು.

3) ಎಲ್ಲಾ ವಿನಿಯಮಗಳು, ಪ್ರಬಂಧಕ ಮಂಡಳಿಯು ಅವುಗಳನ್ನು ಅನುಮೋದಿಸಿದ ದಿನಾಂಕದಿಂದ ಅಥವಾ ಪ್ರಬಂಧಕ ಮಂಡಳಿಯು ನಿರ್ದೇಶಿಸಬಹುದಾದ ಅಂಥ ಇತರ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**43. ಶಾಸನಗಳಿಗೆ ಹಾಗೂ ವಿನಿಯಮಗಳಿಗೆ ಪೂರ್ವಾನ್ವಯ ಪರಿಣಾಮಗಳನ್ನು ನೀಡುವ ಅಧಿಕಾರ.–** ಶಾಸನಗಳು ಮತ್ತು ವಿನಿಯಮಗಳನ್ನು ರಚಿಸುವ ಅಧಿಕಾರವು, ಈ ಅಧಿನಿಯಮದ ಪ್ರಾರಂಭದ ದಿನಾಂಕಕ್ಕಿಂತ ಮುಂಚಿನದಲ್ಲದ ದಿನಾಂಕದಿಂದ ಪೂರ್ವಾನ್ವಯವಾಗುವಂತೆ, ಶಾಸನಗಳನ್ನು ಅಥವಾ ವಿನಿಯಮಗಳನ್ನು ಅಥವಾ ಅವುಗಳಲ್ಲಿ ಯಾವುದಾದರೂ ಒಂದನ್ನು ಜಾರಿಗೆ ನೀಡುವ ಅಧಿಕಾರವನ್ನು ಒಳಗೊಂಡಿರತಕ್ಕದ್ದು. ಆದರೆ ಅಂಥ ಶಾಸನವು, ಅಥವಾ ವಿನಿಯಮವು ಯಾವ ವ್ಯಕ್ತಿಗೆ ಅನ್ವಯವಾಗುವುದೋ ಆ ವ್ಯಕ್ತಿಯ ಹಿತಾಸಕ್ತಿಗೆ ಪ್ರತಿಕೂಲ ಪರಿಣಾಮವನ್ನು ಉಂಟು ಮಾಡುವಂತೆ ಯಾವುದೇ ಶಾಸನ ಅಥವಾ ವಿನಿಯಮಗಳಿಗೆ ಪೂರ್ವಾನ್ವಯ ಪರಿಣಾಮವನ್ನು ನೀಡತಕ್ಕದ್ದಲ್ಲ.

**44. ನಿಯಮಗಳು.–** (1) ಪ್ರಬಂಧಕ ಮಂಡಳಿಯು, ಈ ಅಧಿನಿಯಮ, ಶಾಸನಗಳು ಹಾಗೂ ವಿನಿಯಮಗಳಿಗೆ ಸುಸಂಗತವಾಗಿ ನಿಯಮಗಳನ್ನು ರಚಿಸಬಹುದು.

(2) ನಿಯಮಗಳು,–

(ಎ) ಪ್ರತಿಯೊಂದು ಪ್ರಾಧಿಕಾರದ ಅಥವಾ ಮಂಡಳಿಯ ಸದಸ್ಯರಿಗೆ, ಸಭೆಗಳ ದಿನಾಂಕ ಮತ್ತು ಆ ಸಭೆಗಳಲ್ಲಿ ನಡೆಸಬೇಕಾದ ಕಲಾಪದ ಬಗ್ಗೆ ನೋಟೀಸನ್ನು ಕೊಡುವುದು ಮತ್ತು ಆ ಸಭೆಗಳ ನಡವಳಿಗಳ ದಾಖಲೆಯನ್ನು ಇಡುವುದು;

(ಬಿ) ಸಭೆಗಳಲ್ಲಿ ಅನುಸರಿಸಬೇಕಾದ ಕಾರ್ಯವಿಧಾನ ಮತ್ತು ಸಭೆಗಳ ಗಣಪೂರ್ತಿಗೆ (ಕೋರಂ) ಅಗತ್ಯವಿರುವ ಸದಸ್ಯರ ಸಂಖ್ಯೆ; ಮತ್ತು

(ಸಿ) ಅಂಥ ಪ್ರಾಧಿಕಾರ ಅಥವಾ ಮಂಡಳಿಗೆ ಮಾತ್ರವೇ ಸಂಬಂಧಿಸಿದ ಮತ್ತು ಈ ಅಧಿನಿಯಮ, ಶಾಸನಗಳು ಅಥವಾ ವಿನಿಯಮಗಳ ಮೂಲಕ ಉಪಬಂಧಿಸದೆ ಇರುವ ಎಲ್ಲಾ ವಿಷಯಗಳು,

–ಇವುಗಳಿಗೆ ಉಪಬಂಧ ಕಲ್ಪಿಸಬಹುದು.

(3) ಈ ಪ್ರಕರಣದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವು, ಪ್ರಬಂಧಕ ಮಂಡಳಿಯು ಅನುಮೋದನೆ ನೀಡಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

## ಅಧ್ಯಾಯ – *VI*

## ಕಾಲೇಜುಗಳ ಸಂಯೋಜನೆ ಮತ್ತು ಸಂಸ್ಥೆಗಳ ಮಾನ್ಯತೆ

**45. ಸಂಯೋಜನೆ.–** ಕಾಲೇಜುಗಳ ತನಿಖೆ ನಡೆಸುವ, ಕಾಲೇಜುಗಳಿಗೆ ಸಂಯೋಜನೆ/ಖಾಯಂ ಸಂಯೋಜನೆಯನ್ನು ನೀಡುವ, ಸಂಯೋಜನೆಯನ್ನು ಹಿಂದಕ್ಕೆ ಪಡೆದುಕೊಳ್ಳುವ, ಕಾಲೇಜುಗಳಿಗೆ ಸ್ವಾಯತ್ತ ಸ್ಥಾನಮಾನಗಳನ್ನು ನೀಡುವ ಮತ್ತು ಸಂಶೋಧನಾ ಅಧ್ಯಯನಗಳಿಗಾಗಿನ ಕೆಲವು ಸಂಸ್ಥೆಗಳನ್ನು ಮಾನ್ಯ ಮಾಡುವ ಪ್ರಕ್ರಿಯೆಯು ಹಾಗೂ ಕಾಲೇಜು ಅಥವಾ ವ್ಯಾಸಂಗ ಕ್ರಮಗಳನ್ನು ಸ್ವಯಂ ಮುಕ್ತಾಯಗೊಳಿಸಲು ಅನುಮತಿಸುವುದಕ್ಕಾಗಿನ ಪ್ರಕ್ರಿಯೆಯು, ಈ ಸಂಬಂಧದಲ್ಲಿ ರಚಿಸಿದ ಶಾಸನಗಳಲ್ಲಿ ಗೊತ್ತು ಪಡಿಸಿದಂತೆ ಇರತಕ್ಕದ್ದು.

**46. ದೂರಶಿಕ್ಷಣ.–** ದೂರ ಶಿಕ್ಷಣ ಅಥವಾ ಅಂಚೆ ತೆರಪಿನ ವ್ಯಾಸಂಗ ಕ್ರಮಗಳನ್ನು ಆರಂಭಿಸುವ ಹಾಗೂ ಸಂಸ್ಥೆಗಳನ್ನು ಮಾನ್ಯಗೊಳಿಸುವ ಪ್ರಕ್ರಿಯೆಯು, ಈ ಸಂಬಂಧದಲ್ಲಿ ರಚಿಸಿದ ಶಾಸನಗಳಲ್ಲಿ ಗೊತ್ತುಪಡಿಸಲಾದಂತೆ ಇರತಕ್ಕದ್ದು.

## ಅಧ್ಯಾಯ – *VII*

## ಹಣಕಾಸು, ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ

**47. ವಿಶ್ವವಿದ್ಯಾಲಯದ ನಿಧಿಗಳು.–** (1) ಈ ಕೆಳಕಂಡ ಯಾವುವೇ ಮೂಲಗಳಿಂದ ಸ್ವೀಕರಿಸಿದ ಮೊಬಲಗುಗಳು ವಿಶ್ವವಿದ್ಯಾಲಯದ ನಿಧಿಯ ಭಾಗವಾಗಿರತಕ್ಕದ್ದು, ಎಂದರೆ:–

(ಎ) ವಿಶ್ವವಿದ್ಯಾಲಯ ಅನುದಾನ ಆಯೋಗವು ಅಥವಾ ಕೇಂದ್ರ ಸರ್ಕಾರವು ನೀಡಿದ ಯಾವುದೇ ವಂತಿಗೆ ಅಥವಾ ಅನುದಾನ;

(ಬಿ) ಸರ್ಕಾರವು ನೀಡಿದ ಯಾವುದೇ ವಂತಿಗೆ ಅಥವಾ ಅನುದಾನ;

(ಸಿ) ಖಾಸಗಿ ವ್ಯಕ್ತಿಗಳು ಅಥವಾ ಸಂಸ್ಥೆಗಳು ನೀಡಿದ, ಯಾವುದೇ ಮರಣ ಶಾಸನ ದಾನ, ದಾನಗಳು, ದತ್ತಿಗಳು ಅಥವಾ ಇತರ ಅನುದಾನಗಳು;

(ಡಿ) ಫೀಜು ಮತ್ತು ಚಾರ್ಜುಗಳ ಮೂಲಕ ವಿಶ್ವವಿದ್ಯಾಲಯವು ಸ್ವೀಕರಿಸಿದ ಆದಾಯ;

(ಇ) ಕೈಗಾರಿಕೆಗಳು, ವ್ಯಾಪಾರಿಗಳು, ಉದ್ಯಮಿಗಳಿಂದ ಯಾವುದೇ ವಂತಿಗೆ ಅಥವಾ ಮರಣ ಶಾಸನ ದಾನಗಳು;

(ಎಫ್) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿಗೆ ಒಳಪಟ್ಟು ವಿದೇಶೀ ಸರ್ಕಾರಗಳಿಂದ ಅಥವಾ ಯಾವುದೇ ವಿದೇಶಿ ಸಂಸ್ಥೆಗಳಿಂದ ಅಥವಾ ಕಂಪನಿಗಳಿಂದ ಯಾವುದೇ ವಂತಿಗೆ ಅಥವಾ ದತ್ತಿಗಳು;

(ಜಿ) ಇತರ ಮೂಲಗಳಿಂದ ಸ್ವೀಕರಿಸಲಾದ ಮೊಬಲಗುಗಳು.

(2) ಸದರಿ ನಿಧಿಯನ್ನು ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮ, 1934ರಲ್ಲಿ ಪರಿಭಾಷಿಸಲಾದಂತೆ, ಯಾವುದೇ ಅನುಸೂಚಿತ ಬ್ಯಾಂಕಿನಲ್ಲಿ ಅಥವಾ ಬ್ಯಾಂಕಿಂಗ್ ಕಂಪನಿಗಳ (ಉದ್ಯಮಗಳ ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1970ರಡಿಯಲ್ಲಿ ಸ್ಥಾಪನೆಯಾದ ಸಂವಾದಿ ಹೊಸ ಬ್ಯಾಂಕಿನಲ್ಲಿ ಇಡತಕ್ಕದ್ದು ಅಥವಾ ಪ್ರಬಂಧಕ ಮಂಡಳಿಯು ನಿರ್ಧರಿಸಬಹುದಾದಂತೆ ಭಾರತೀಯ ನ್ಯಾಸಗಳ ಅಧಿನಿಯಮ, 1882ರ ಮೂಲಕ ಪ್ರಾಧಿಕೃತವಾದ ಭದ್ರತೆಗಳಲ್ಲಿ ಹೂಡಬಹುದು.

(3) ಶಾಸನಗಳ ಮೂಲಕ ನಿಯಮಿಸಲಾದ ರೀತಿಯಲ್ಲಿ ವಿಶ್ವವಿದ್ಯಾಲಯದ ಯಾವುದೇ ಉದ್ದೇಶಗಳಿಗಾಗಿ ಸದರಿ ನಿಧಿಯನ್ನು ವಿನಿಯೋಗಿಸಬಹುದು.

**48. ವಾರ್ಷಿಕ ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆ.–** (1) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು, ಲೆಕ್ಕ ಪರಿಶೋಧನೆ ಮತ್ತು ಹಣಕಾಸು ಪರಿಷತ್ತಿನ ನಿರ್ದೇಶನಗಳಡಿಯಲ್ಲಿ ತಯಾರಿಸತಕ್ಕದ್ದು.

(2) ವಿಶ್ವವಿದ್ಯಾಲಯದ ಲೆಕ್ಕಪತ್ರಗಳನ್ನು, ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತಿನ ನೇಮಕಗೊಂಡ ಲೆಕ್ಕ ಪರಿಶೋಧಕರು ವರ್ಷಕೊಮ್ಮೆ ಲೆಕ್ಕ ಪರಿಶೋಧನೆ ಮಾಡತಕ್ಕದ್ದು:

ಪರಂತು, ವಿಶ್ವವಿದ್ಯಾಲಯದ ಲೆಕ್ಕಪತ್ರಗಳ ಲೆಕ್ಕಪರಿಶೋಧನೆಯನ್ನು ಅವಶ್ಯವೆಂದು ಭಾವಿಸಿದಾಗಲೆಲ್ಲಾ, ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಸಂಸ್ಥೆಗಳು ಒಳಗೊಂಡಂತೆ, ಅದು ನಿರ್ದಿಷ್ಟ ಪಡಿಸಬಹುದಾದಂತೆ ಅಂಥ ಲೆಕ್ಕ ಪರಿಶೋಧಕರಿಂದ ಲೆಕ್ಕಪರಿಶೋಧನೆಯಾಗಬೇಕೆಂದು ನಿರ್ದೇಶಿಸಲು ಸರ್ಕಾರವು ಅಧಿಕಾರವನ್ನು ಹೊಂದಿರತಕ್ಕದ್ದು.

(3) ಲೆಕ್ಕ ಪರಿಶೋಧನೆಯಾದ ಲೆಕ್ಕಪತ್ರಗಳನ್ನು, ಲೆಕ್ಕಪರಿಶೋಧನಾ ವರದಿಯೊಂದಿಗೆ, ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತಿನ, ಪ್ರಬಂಧಕ ಮಂಡಳಿಯ ಮುಂದೆ ಇಡತಕ್ಕದ್ದು ಹಾಗೂ ಸರ್ಕಾರಕ್ಕೆ ಸಹ ಸಲ್ಲಿಸತಕ್ಕದ್ದು.

(4) ಪ್ರಬಂಧಕ ಮಂಡಳಿಯು, ತನ್ನ ವಾರ್ಷಿಕ ಸಭೆಯಲ್ಲಿ ವಾರ್ಷಿಕ ಲೆಕ್ಕಪತ್ರಗಳನ್ನು ಪರಿಗಣಿಸತಕ್ಕದ್ದು. ಪ್ರಬಂಧಕ ಮಂಡಳಿಯು ಇದಕ್ಕೆ ಸಂಬಂಧಪಟ್ಟಂತೆ ನಿರ್ಣಯಗಳನ್ನು ಹೊರಡಿಸಬಹುದು ಮತ್ತು ಅದನ್ನು ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತಿಗೆ ತಿಳಿಸಬಹುದು, ಹಣಕಾಸು ಪರಿಷತ್ತು, ಪ್ರಬಂಧಕ ಮಂಡಳಿಯು ಮಾಡಿದ ಸಲಹೆಗಳನ್ನು ಪರಿಗಣಿಸತಕ್ಕದ್ದು ಮತ್ತು ಅದರ ಮೇಲೆ ತಾನು ಸೂಕ್ತವೆಂದು ಭಾವಿಸುವಂಥ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು, ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತು ತೆಗೆದುಕೊಂಡ ಕ್ರಮಗಳ ಬಗ್ಗೆ ಅಥವಾ ಕ್ರಮ ತೆಗೆದುಕೊಳ್ಳದಿರುವುದಕ್ಕೆ ಕಾರಣಗಳನ್ನು ಅದರ ಮುಂದಿನ ಸಭೆಯಲ್ಲಿ ಪ್ರಬಂಧಕ ಮಂಡಳಿಗೆ ತಿಳಿಸತಕ್ಕದ್ದು.

**49. ಹಣಕಾಸಿನ ಅಂದಾಜುಗಳು.–** (1) ಲೆಕ್ಕ ಪರಿಶೋಧನೆ ಮತ್ತು ಹಣಕಾಸು ಪರಿಷತ್ತು, ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ದಿನಾಂಕಕ್ಕೆ ಮೊದಲು, ಮುಂಬರುವ ವರ್ಷದ ಹಣಕಾಸು ಅಂದಾಜುಗಳನ್ನು ತಯಾರಿಸತಕ್ಕದ್ದು ಮತ್ತು ಅದನ್ನು ಪ್ರಬಂಧಕ ಮಂಡಳಿಯ ಮುಂದೆ ಮಂಡಿಸತಕ್ಕದ್ದು.

(2) ಲೆಕ್ಕ ಪರಿಶೋಧನೆ ಮತ್ತು ಹಣಕಾಸು ಪರಿಷತ್ತು, ಆಯವ್ಯಯದಲ್ಲಿ ಒದಗಿಸಲಾದ ಮೊಬಲಗಿಗಿಂತ ಹೆಚ್ಚಿನ ಖರ್ಚನ್ನು ವಹಿಸಬೇಕಾಗಿರುವಲ್ಲಿ ಅಥವಾ ತುರ್ತು ಸಂದರ್ಭದಲ್ಲಿ, ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಿ, ವಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೊಳಪಟ್ಟು, ವೆಚ್ಚವನ್ನು ವಹಿಸಬಹುದು. ಅಂಥ ಹೆಚ್ಚಿನ ವೆಚ್ಚಕ್ಕೆ ಸಂಬಂಧಿಸಿದಂತೆ, ಆಯವ್ಯಯದಲ್ಲಿ ಯಾವುದೇ ಅವಕಾಶವನ್ನು ಮಾಡಿಲ್ಲದಿದ್ದರೆ, ಪ್ರಬಂಧಕ ಮಂಡಳಿಗೆ ಅದರ ಮುಂದಿನ ಸಭೆಯಲ್ಲಿ ವರದಿಯನ್ನು ಮಾಡತಕ್ಕದ್ದು.

(3) ವಿಶ್ವವಿದ್ಯಾಲಯವು ಸರ್ಕಾರದ ಪೂರ್ವಾನುಮೋದನೆ ಇಲ್ಲದೇ, ತನ್ನ ಸಿಬ್ಬಂದಿ ವರ್ಗದ ವೇತನ ಶ್ರೇಣಿಗಳನ್ನು ಪರಿಷ್ಕರಿಸತಕ್ಕದ್ದಲ್ಲ ಅಥವಾ ಸರ್ಕಾರದಿಂದ ಯಾವುದೇ ಸರಿಸಮಾನ ವಂತಿಗೆಗಳನ್ನು ಒಳಗೊಳ್ಳುವಂಥ ಯಾವುವೇ ಯೋಜನೆಗಳನ್ನು ಅಥವಾ ಪುರಸ್ಕರಣ ಪ್ರಾಧಿಕಾರಗಳಿಂದ ಸಹಾಯವು ನಿಂತುಹೋದ ತರುವಾಯ ಸರ್ಕಾರದ ಮೇಲೆ ಆವರ್ತಕ ಹೊಣೆ ವಿಧಿಸುವ ಯಾವುದೇ ಯೋಜನೆಯನ್ನು ಕಾರ್ಯಗತಗೊಳಿಸತಕ್ಕದ್ದಲ್ಲ:

ಪರಂತು, ಸರ್ಕಾರದ ಮೇಲೆ ಯಾವುದೇ ಹೊರೆಯನ್ನು ಉಂಟು ಮಾಡದಿರುವ ಯೋಜನೆಗೆ ಅಥವಾ ಕಾರ್ಯಕ್ರಮಕ್ಕೆ ಪೂರ್ವಾನುಮೋದನೆಯ ಅವಶ್ಯಕತೆ ಇರುವುದಿಲ್ಲ ಮತ್ತು ಆ ಸಂಬಂಧದ ಸಂಪೂರ್ಣ ವೆಚ್ಚವನ್ನು ವಿಶ್ವವಿದ್ಯಾಲಯದ ನಿಧಿಯಿಂದ ಭರಿಸತಕ್ಕದ್ದು.

**50. ಲೆಕ್ಕಪರಿಶೋಧನೆಗೆ ನಿರ್ದೇಶಿಸಲು ಸರ್ಕಾರದ ಅಧಿಕಾರ.–** (1) ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಸಂಸ್ಥೆಗಳೂ ಒಳಗೊಂಡಂತೆ ವಿಶ್ವವಿದ್ಯಾಲಯದ ಲೆಕ್ಕಪತ್ರಗಳ ಲೆಕ್ಕಪರಿಶೋಧನೆಯನ್ನು ಅವಶ್ಯವೆಂದು ಭಾವಿಸಿದಾಗಲೆಲ್ಲಾ ಅದು ನಿರ್ದಿಷ್ಟಪಡಿಸಬಹುದಾದಂತೆ ಅಂಥ ಲೆಕ್ಕಪರಿಶೋಧಕರಿಂದ ಲೆಕ್ಕಪರಿಶೋಧನೆಯಾಗಬೇಕೆಂದು ನಿರ್ದೇಶಿಸಲು ಸರ್ಕಾರಕ್ಕೆ ಅಧಿಕಾರವಿರತಕ್ಕದ್ದು.

(2) ಮಹಾಲೇಖಾಪಾಲರಿಂದ ವಿಶ್ವವಿದ್ಯಾಲಯದ ಲೆಕ್ಕಪತ್ರಗಳ ಲೆಕ್ಕಪರಿಶೋಧನೆಯಾದಾಗ ಮತ್ತು ಆಕ್ಷೇಪಗಳೊಡನೆ ಅದರ ವರದಿಯನ್ನು ಅಥವಾ ಸ್ಪಷ್ಟೀಕರಣಗಳಿಗಾಗಿ ತಡೆಹಿಡಿದ ಬಾಬುಗಳ ಸಂಬಂಧದಲ್ಲಿ ಹೆಚ್ಚಿನ ಟೀಕೆಟಿಪ್ಪಣಿಗಳನ್ನು ಅಥವಾ ಷರಾಗಳನ್ನು ವಿಶ್ವವಿದ್ಯಾಲಯಕ್ಕೆ ಲಭ್ಯವಾಗುವಂತೆ ಮಾಡತಕ್ಕದ್ದು. ವಿಶ್ವವಿದ್ಯಾಲಯವು ಅಂಥ ವರದಿಯನ್ನು ಸ್ವೀಕರಿಸಿದ ದಿನದಿಂದ ಮೂವತ್ತು ದಿನಗಳ ಒಳಗಾಗಿ ತನ್ನ ಟೀಕೆಟಿಪ್ಪಣಿಗಳನ್ನು ಅಥವಾ ಷರಾಗಳನ್ನು ಸರ್ಕಾರದ ಮೂಲಕ ಮಹಾಲೇಖಾಪಾಲರಿಗೆ ಕಳುಹಿಸತಕ್ಕದ್ದು.

**51. ವಾರ್ಷಿಕ ವರದಿಗಳು.–** (1) ಲೆಕ್ಕಪರಿಶೋಧನೆ ಮತ್ತು ಹಣಕಾಸು ಪರಿಷತ್ತು, ಪ್ರತಿಯೊಂದು ಹಣಕಾಸು ವರ್ಷಕ್ಕೆ, ಪ್ರಬಂಧಕ ಮಂಡಳಿಯು ನಿರ್ದಿಷ್ಟಪಡಿಸಬಹುದಾದಂಥ ವಿವರಗಳನ್ನು ಒಳಗೊಂಡ ವಾರ್ಷಿಕ ವರದಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ದಿನಾಂಕದಂದು ಅಥವಾ ಅದಕ್ಕೆ ಮೊದಲು ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು. ಪ್ರಬಂಧಕ ಮಂಡಳಿಯು ಅವುಗಳ ಮೇಲೆ ನಿರ್ಣಯಗಳನ್ನು ಅಂಗೀಕರಿಸಬಹುದು ಮತ್ತು ಕುಲಪತಿಯವರು, ಅದಕ್ಕನುಸಾರವಾಗಿ ಕ್ರಮಕೈಗೊಳ್ಳತಕ್ಕದ್ದು. ಕೈಗೊಳ್ಳಲಾದ ಕ್ರಮವನ್ನು ಪ್ರಬಂಧಕ ಮಂಡಳಿಗೆ ತಿಳಿಸತಕ್ಕದ್ದು.

(2) ವಾರ್ಷಿಕ ವರದಿಯ ಪ್ರತಿಗಳನ್ನು ಹಾಗೂ ಅವುಗಳ ಮೇಲಿನ ಪ್ರಬಂಧಕ ಮಂಡಳಿಯ ನಿರ್ಣಯಗಳನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು. ಸರ್ಕಾರವು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ, ಅವುಗಳ ಮುಂದಿನ ತಕ್ಷಣದ ಅಧಿವೇಶನದಲ್ಲಿ ಅದನ್ನು ಮಂಡಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅದನ್ನು ಸಾರ್ವಜನಿಕರಿಗೆ ವಿದ್ಯುನ್ಮಾನ ಮಾಧ್ಯಮದ ಮೂಲಕ ಲಭ್ಯವಾಗುವಂತೆ ಮಾಡತಕ್ಕದ್ದು.

**52. ಕರಾರುಗಳನ್ನು ನಿರ್ವಹಿಸುವುದು.–** ಪ್ರಬಂಧಕ ಮಂಡಳಿಯು ಅನುಮೋದಿಸಿದ ವಿಶ್ವವಿದ್ಯಾಲಯದ ವ್ಯವಸ್ಥಾಪನೆ ಮತ್ತು ಆಡಳಿತಕ್ಕೆ ಸಂಬಂಧಪಟ್ಟ ಎಲ್ಲಾ ಕರಾರುಗಳನ್ನು ರಿಜಿಸ್ಟ್ರಾರರು ಅಥವಾ ಅಧಿಕಾರವನ್ನು ಪ್ರತ್ಯಾಯೋಜಿಸಲಾದ ಅಂಥ ಇತರ ಅಧಿಕಾರಿಯು ನಿರ್ವಹಿಸತಕ್ಕದ್ದು ಮತ್ತು ಇಪ್ಪತ್ತೈದು ಲಕ್ಷ ರೂಪಾಯಿಗಳಿಗೆ ಮೀರಿದ ಕರಾರಿನ ಸಂದರ್ಭದಲ್ಲಿ, ಅಂಥ ಪ್ರತ್ಯಾಯೋಜನೆಯು ಕುಲಪತಿಗೆ ಮಾತ್ರವೇ ಆಗಿರತಕ್ಕದ್ದು.

## ಅಧ್ಯಾಯ – *VIII*

## ದಾಖಲಾತಿ ಪಟ್ಟಿಗೆ ಸೇರಿಸುವುದು ಮತ್ತು ಪದವಿಗಳು

**53. ವಿದ್ಯಾರ್ಥಿಗಳ ಪ್ರವೇಶಕ್ಕಾಗಿ ಅರ್ಹತೆ.–** ಕಾಲ ಕಾಲಕ್ಕೆ ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಅರ್ಹತೆಗಳನ್ನು ಯಾವೊಬ್ಬ ವಿದ್ಯಾರ್ಥಿಯು ಹೊಂದಿದ್ದ ಹೊರತು, ಅಧ್ಯಯನ ಕ್ರಮ, ಪದವಿ ಅಥವಾ ಡಿಪ್ಲೋಮಕ್ಕೆ ಪ್ರವೇಶ ಪಡೆಯಲು ಅರ್ಹನಾಗಿರತಕ್ಕದ್ದಲ್ಲ.

**54. ಮೌಲ್ಯಮಾಪನ ಅಥವಾ ಪರೀಕ್ಷಾ ಪದ್ಧತಿ.–** ಮೌಲ್ಯಮಾಪನ ಅಥವಾ ಪರೀಕ್ಷಾ ಪದ್ಧತಿ ಮತ್ತು ಡಿಪ್ಲೊಮೊಗಳು ಮತ್ತು ಪದವಿಗಳನ್ನು ನೀಡುವುದನ್ನು ಈ ಸಂಬಂಧದಲ್ಲಿ ರಚಿಸಲಾದ ವಿನಿಯಮಗಳ ಮೂಲಕ ನಿಯಮಿಸತಕ್ಕದ್ದು.

**55. ಗೌರವ ಪದವಿಗಳು.–** ಯಾವೊಬ್ಬ ವ್ಯಕ್ತಿಯು, ಅವನ ಅಥವಾ ಅವಳ ಶ್ರೇಷ್ಠತೆಯ, ಸಾಧನೆಯ ಮತ್ತು ಸ್ಥಾನದ ಕಾರಣದಿಂದಾಗಿ ಗೌರವ ಪದವಿಯನ್ನು ಅಥವಾ ಶೈಕ್ಷಣಿಕ ಪ್ರಶಸ್ತಿಯನ್ನು ಸ್ವೀಕರಿಸಲು ಸೂಕ್ತರಾಗಿದ್ದಾರೆ ಮತ್ತು ಯುಕ್ತರಾಗಿದ್ದಾರೆ ಎಂದು ಪ್ರಬಂಧಕ ಮಂಡಲಿಯು ಅಭಿಪ್ರಾಯಪಟ್ಟರೆ, ಅದು ಯಾವೊಬ್ಬ ವ್ಯಕ್ತಿಗೆ ಅಂಥ ಪದವಿ ಅಥವಾ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನ ಮಾಡಲು ಸರ್ವಾನುಮತದಿಂದ ನಿರ್ಣಯ ಕೈಗೊಳ್ಳಬಹುದು.

**56. ಪದವಿ ಅಥವಾ ಡಿಪ್ಲೊಮಾಗಳನ್ನು ಹಿಂತೆಗೆದುಕೊಳ್ಳುವುದು.–** (1) ಯಾವೊಬ್ಬ ವ್ಯಕ್ತಿಗೆ ನೀಡಿದ ಯಾವುದೇ ಪ್ರಶಸ್ತಿ, ಪದವಿ, ಡಿಪ್ಲೊಮಾ ಅಥವಾ ಪ್ರದಾನ ಮಾಡಲಾದ ಅಥವಾ ನೀಡಿದ ವಿಶೇಷಾಧಿಕಾರವನ್ನು, ಅಂಥ ವ್ಯಕ್ತಿಯು ಒಂದು ಅಪರಾಧಕ್ಕಾಗಿ ನ್ಯಾಯಾಲಯದಿಂದ ಅಪರಾಧಿಯೆಂದು ನಿರ್ಣಿತನಾಗಿದ್ದಾನೆಂದು, ಆತನ ಕೃತ್ಯವು ನೈತಿಕ ಅಧಃಪತನವನ್ನು ಒಳಗೊಂಡಿದೆ ಅಥವಾ ಆತನು ದುರ್ನಡತೆಯ ತಪ್ಪಿತಸ್ಥನೆಂದು ಪ್ರಬಂಧಕ ಮಂಡಳಿಯು ಅಭಿಪ್ರಾಯಪಟ್ಟರೆ, ಪ್ರಬಂಧಕ ಮಂಡಳಿಯ ಒಟ್ಟು ಸದಸ್ಯರ ಬಹುಮತದಿಂದ ಮತ್ತು ಆ ಸಭೆಯಲ್ಲಿ ಹಾಜರಿದ್ದು ಮತ ಚಲಾಯಿಸುವ ಸದಸ್ಯರ ಮೂರನೇ ಎರಡರಷ್ಟಕ್ಕಿಂತ ಕಡಿಮೆಯಿಲ್ಲದ ಬಹುಮತದಿಂದ ಅಂಗೀಕೃತವಾದ ನಿರ್ಣಯದ ಮೂಲಕ ಪ್ರಬಂಧಕ ಮಂಡಳಿಯು, ವಿದ್ಯಾ ವಿಷಯಕ ಪರಿಷತ್ತು ಅಥವಾ ಸಂದರ್ಭಾನುಸಾರವಾಗಿ ವ್ಯವಸ್ಥಾಪನಾ ಪರಿಷತ್ತಿನ ಶಿಫಾರಸ್ಸಿನ ಮೇರೆಗೆ, ಅಂಥ ಯಾವೊಬ್ಬ ವ್ಯಕ್ತಿಗೆ ಪ್ರದಾನ ಮಾಡಲಾಗಿದ್ದ ಅಥವಾ ಕೊಡಲಾಗಿದ್ದ ಅಂಥ ಯಾವುದೇ ಪ್ರಶಸ್ತಿ, ಪದವಿ, ಡಿಪ್ಲೊಮಾ ಅಥವಾ ವಿಶೇಷಾಧಿಕಾರವನ್ನು ಹಿಂತೆಗೆದುಕೊಳ್ಳಬಹುದು.

(2) ಈ ನಿಯಮದ ಅಡಿಯಲ್ಲಿ, ಯಾವೊಬ್ಬ ವ್ಯಕ್ತಿಯ ವಿರುದ್ಧ, ಕೈಗೊಳ್ಳಬೇಕೆಂದು ಪ್ರಸ್ತಾವಿಸಿದ ಕ್ರಮದ ವಿರುದ್ಧ ಕಾರಣ ತೋರಿಸಲು ಅವನಿಗೆ ಅವಕಾಶವನ್ನು ಕೊಟ್ಟ ಹೊರತು, ಯಾವುದೇ ಕ್ರಮ ಕೈಗೊಳ್ಳತಕ್ಕದ್ದಲ್ಲ.

(3) ಪ್ರಬಂಧಕ ಮಂಡಳಿಯು ಅಂಗೀಕರಿಸಿದ ನಿರ್ಣಯದ ಪ್ರತಿಯೊಂದನ್ನು ಸಂಬಂಧಪಟ್ಟ ವ್ಯಕ್ತಿಗೆ ಕೂಡಲೇ ಕಳುಹಿಸತಕ್ಕದ್ದು.

(4) ಪ್ರಬಂಧಕ ಮಂಡಳಿಯು ತೆಗೆದುಕೊಂಡ ತೀರ್ಮಾನದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಅಂಥ ನಿರ್ಣಯವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ, ಅಧ್ಯಕ್ಷರಿಗೆ ಅಪೀಲು ಸಲ್ಲಿಸಬಹುದು.

(5) ಅಂಥ ಅಪೀಲಿನ ಮೇಲೆ ಅಧ್ಯಕ್ಷರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**57. ಸಿಬ್ಬಂದಿಯ ವರ್ಗಾವಣೆ-** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕರಾರು, ಒಪ್ಪಂದ ಅಥವಾ ಯಾವುದೇ ಇತರ ಕಾನೂನಿನಲ್ಲಿ ಮತ್ತು ವಿಶ್ವವಿದ್ಯಾಲಯದ ನೌಕರರಿಗೆ ಅನ್ವಯವಾಗುವ ಸೇವಾ ಷರತ್ತುಗಳಲ್ಲಿ ಏನೇ ಇದ್ದರೂ, ಅಧ್ಯಕ್ಷರು, ಸರ್ಕಾರದೊಡನೆ ಸಮಾಲೋಚಿಸಿ, ಆಡಳಿತಾತ್ಮಕ ಕಾರಣಗಳಿಗಾಗಿ, ವಿಶ್ವವಿದ್ಯಾಲಯದಲ್ಲಿ ಯಾವುದೇ ಹುದ್ದೆಯನ್ನು ಧಾರಣ ಮಾಡಿರುವ ಯಾವೊಬ್ಬ ನೌಕರನನ್ನು, ಈ ಅಧಿನಿಯಮದ ಅಡಿಯಲ್ಲಿ ಅಥವಾ ರಾಜ್ಯ ವಿಧಾನಮಂಡಲದಿಂದ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ಸ್ಥಾಪಿಸಲಾದ ಯಾವುದೇ ಇತರ ವಿಶ್ವವಿದ್ಯಾಲಯಕ್ಕೆ ವರ್ಗಾವಣೆ ಮಾಡಬಹುದು ಮತ್ತು ಹಾಗೆ ವರ್ಗಾವಣೆಗೊಂಡ ನೌಕರನು ವರ್ಗಾವಣೆಯ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸೇವಾ ಷರತ್ತುಗಳೊಂದಿಗೆ ಹೋಗತಕ್ಕದ್ದು. ವರ್ಗಾವಣೆಗೊಂಡ ತರುವಾಯ ಅಂಥ ನೌಕರನು ವರ್ಗಾವಣೆಗೊಂಡ ವಿಶ್ವವಿದ್ಯಾಲಯದ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡಿದ್ದಾನೆಂದು ಭಾವಿಸತಕ್ಕದ್ದು:

ಪರಂತು, ಹಾಗೆ ವರ್ಗಾವಣೆಗೊಂಡ ನೌಕರನು ತಾನು ಪ್ರಾರಂಭದಲ್ಲಿ ನೇಮಕಗೊಂಡ ವಿಶ್ವವಿದ್ಯಾಲಯದಲ್ಲಿನ ತನ್ನ ಹುದ್ದೆಯ ಧಾರಣಾಧಿಕಾರವನ್ನು ಉಳಿಸಿಕೊಳ್ಳುವ ಅಥವಾ ತಾನು ವರ್ಗಾವಣೆಗೊಂಡ ವಿಶ್ವವಿದ್ಯಾಲಯದಲ್ಲಿ ವಿಲೀನಗೊಳ್ಳುವ ಆಯ್ಕೆಯ ಅವಕಾಶವನ್ನು ಹೊಂದಿರತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ನೌಕರನ ಅಂಥ ವರ್ಗಾವಣೆಯ ಆದೇಶವನ್ನು ನೀಡುವ ಉದ್ದೇಶಕ್ಕಾಗಿ, ಹಾಗೆ ವರ್ಗಾವಣೆಗೊಂಡ ನೌಕರನು ಧಾರಣ ಮಾಡಿದ್ದ ಹುದ್ದೆಗಳ ಸಂಬಂಧದಲ್ಲಿ ಅಧ್ಯಕ್ಷರನ್ನು ನೇಮಕ ಪ್ರಾಧಿಕಾರವೆಂದು ಭಾವಿಸತಕ್ಕದ್ದು.

(3) ಹಾಗೆ ವರ್ಗಾವಣೆಗೊಂಡ ನೌಕರನು, ರಾಜ್ಯ ಸಿವಿಲ್ ಸೇವೆಗಳ ಸಂವಾದಿ ಹುದ್ದೆಗಳಿಗೆ ಅನ್ವಯವಾಗುವ ಶ್ರೇಣಿಗಳಲ್ಲಿ ದೊರೆಯಬಹುದಾದ ಪ್ರಯಾಣಭತ್ಯೆ, ವರ್ಗಾವಣೆ ಅನುದಾನ ಮತ್ತು ವೈಯಕ್ತಿಕ ವಸ್ತುಗಳ ಸಾಗಣೆ ವೆಚ್ಚ ಪಡೆಯಲು ಅರ್ಹನಾಗಿರತಕ್ಕದ್ದು.

(4) ಸಾರ್ವಜನಿಕ ಹಿತಾಸಕ್ತಿಯಲ್ಲಿ ಹಾಗೆ ವರ್ಗಾವಣೆಗೊಂಡ ಮತ್ತು ತಾನು ನೇಮಕಗೊಂಡ ವಿಶ್ವವಿದ್ಯಾಲಯದಲ್ಲಿ ತನ್ನ ಧಾರಣಾಧಿಕಾರವನ್ನು ಉಳಿಸಿಕೊಳ್ಳುವ ಆಯ್ಕೆ ಮಾಡಿಕೊಳ್ಳದ ಒಬ್ಬ ನೌಕರನ ಜ್ಯೇಷ್ಠತೆಯನ್ನು ಆಯಾ ಉದ್ಯೋಗಿ ವೃಂದ ಅಥವಾ ಹುದ್ದೆಯಲ್ಲಿ ಆತನು ಮೊದಲು ನೇಮಕಗೊಂಡ ದಿನಾಂಕಕ್ಕೆ ಅನುಗುಣವಾಗಿ ನಿರ್ಧರಿಸತಕ್ಕದ್ದು.

**58. ಅಧ್ಯಾಪಕನ ಕರ್ತವ್ಯಗಳು.-** (1) ವಿಶ್ವವಿದ್ಯಾಲಯದ ಅಥವಾ ಸಂಯೋಜಿತ ಕಾಲೇಜಿನ ಪ್ರತಿಯೊಬ್ಬ ಅಧ್ಯಾಪಕನು, ವಿಶ್ವವಿದ್ಯಾಲಯವು ಕಾಲಕಾಲಕ್ಕೆ ಅವನಿಗೆ ವಹಿಸಲಾದ ಬೋಧನೆ, ಸಂಶೋಧನೆ, ಪರೀಕ್ಷೆ ಅಥವಾ ಶೈಕ್ಷಣಿಕ ಕಾರ್ಯಗಳಿಗೆ ಸಂಬಂಧಪಟ್ಟ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

(2) (1)ನೇ ಉಪಪ್ರಕರಣದ ಉದ್ದೇಶಕ್ಕಾಗಿ, ವಿಶ್ವವಿದ್ಯಾಲಯದ ಮತ್ತು ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡ ಕಾಲೇಜಿನ ಸೇವೆಯಲ್ಲಿರುವ ಬೋಧಕ ಮತ್ತು ಬೋಧಕೇತರ ನೌಕರರನ್ನು ವಿಶ್ವವಿದ್ಯಾಲಯವು ಆಡಳಿತಾತ್ಮಕವಾಗಿ ನಿಯಂತ್ರಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅವರಿಗೆ ಕಾಲಕಾಲಕ್ಕೆ ನೀಡಿದ ಸೂಚನೆಗಳು ಅಥವಾ ಆದೇಶಗಳನ್ನು ಅವರು ಪಾಲಿಸತಕ್ಕದ್ದು.

**59. ಪರೀಕ್ಷಾ ಕಾರ್ಯವನ್ನು ನೆರವೇರಿಸುವ ಹೊಣೆ.-** (1) ಯಾವ ವ್ಯಕ್ತಿಗೆ ಪ್ರಶ್ನೆ ಪತ್ರಿಕೆಯನ್ನು ಸಿದ್ಧಪಡಿಸುವುದು, ಪರಿವೀಕ್ಷಣೆ, ಮೇಲ್ವಿಚಾರಣೆ, ಮೌಲ್ಯಮಾಪನ, ಪ್ರಾಯೋಗಿಕ ಪರೀಕ್ಷೆಗಳನ್ನು ನಡೆಸುವುದು, ಪ್ರಶ್ನೆ ಪತ್ರಿಕೆಗಳ ಮತ್ತು ಉತ್ತರ ಪತ್ರಿಕೆಗಳ ಮುದ್ರಣ, ಅಂಕಗಳನ್ನು ಪಟ್ಟಿ ಮಾಡುವುದು ಮತ್ತು ಅಂಕಿಪಟ್ಟಿಗಳನ್ನು ಸಿದ್ಧಪಡಿಸುವುದೇ ಮುಂತಾದ, ಪರೀಕ್ಷೆಗೆ ಸಂಬಂಧಿಸಿದ ಕಾರ್ಯವನ್ನು ಹಾಗೂ ಅದಕ್ಕೆ ಪ್ರಾಸಂಗಿಕವಾದ ಮತ್ತು ಅದಕ್ಕೆ ಸಂಬಂಧಿಸಿದಂಥ ಎಲ್ಲ ಚಟುವಟಿಕೆಗಳನ್ನು ವಹಿಸಲಾಗಿದೆಯೋ ಆ ವ್ಯಕ್ತಿಯು, ಅಂಥ ಕರ್ತವ್ಯಗಳನ್ನು ಶೈಕ್ಷಣಿಕ ಗುಣಮಟ್ಟಗಳನ್ನು ಸಾಧಿಸುವುದಕ್ಕಾಗಿ ವಿವೇಚನೆಯಿಂದ ಮತ್ತು ಅತ್ಯಂತ ಪ್ರಾಮಾಣಿಕತೆಯಿಂದ ನಿರ್ವಹಿಸತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಪರೀಕ್ಷಾ ಕಾರ್ಯವನ್ನು ಹಂಚಿಕೆ ಮಾಡಲಾಗಿರುವ ಯಾವೊಬ್ಬ ವ್ಯಕ್ತಿಯು, ಕರ್ತವ್ಯಗಳ ಉಲ್ಲಂಘನೆಯ ತಪ್ಪಿತಸ್ಥನೆಂದು ಕಂಡು ಬಂದರೆ ಅಥವಾ ದುರ್ನಡತೆಯಲ್ಲಿ ಪಾಲ್ಗೊಂಡಿದ್ದರೆ, ಅಪರಾಧ ನಿರ್ಣಯವಾದ ತರುವಾಯ, ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಎರಡು ಸಾವಿರ ರೂಪಾಯಿಗಳ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(3) ರಿಜಿಸ್ಟ್ರಾರ್ (ಮೌಲ್ಯಮಾಪನ) ನೀಡಿದ ದೂರಿನ ಮೇಲಲ್ಲದೆ, ಈ ಪ್ರಕರಣದ ಅಡಿಯಲ್ಲಿ ದಂಡನೀಯವಾದ ಒಂದು ಅಪರಾಧದ ಅಥವಾ ಅಂಥ ಅಪರಾಧದ ದುಷ್ಪ್ರೇರಣೆಯ ಸಂಜ್ಞಾನವನ್ನು ಯಾವುದೇ ನ್ಯಾಯಾಲಯವು ತೆಗೆದುಕೊಳ್ಳತಕ್ಕದ್ದಲ್ಲ.

**60. ಅಪರಾಧದ ದುಷ್ಪ್ರೇರಣೆಗಾಗಿ ಶಿಕ್ಷೆ.-** 59ನೇ ಪ್ರಕರಣದ ಅಡಿಯಲ್ಲಿ ದಂಡನೀಯವಾದ ಒಂದು ಅಪರಾಧವನ್ನು ಪ್ರಚೋದಿಸುವ ಅಥವಾ ದುಷ್ಪ್ರೇರಿಸುವ ಯಾವೊಬ್ಬ ವ್ಯಕ್ತಿಯು, ಅಪರಾಧ ನಿರ್ಣಯವಾದ ತರುವಾಯ, ಆ ಪ್ರಕರಣದಲ್ಲಿ ಅದಕ್ಕಾಗಿ ಉಪಬಂಧಿಸಲಾದ ಶಿಕ್ಷೆಯಿಂದಲೇ ದಂಡಿತನಾಗತಕ್ಕದ್ದು.

**61. ಖಾಸಗಿ ಟ್ಯೂಷನ್ ಮೇಲೆ ಪ್ರತಿಬಂಧ.-** ವಿಶ್ವವಿದ್ಯಾಲಯದ ಅಥವಾ ಸಂಯೋಜಿತ ಕಾಲೇಜಿನ ಯಾವೊಬ್ಬ ಅಧ್ಯಾಪಕನು, ವಿಶ್ವವಿದ್ಯಾಲಯದ ಅಥವಾ ಅವನನ್ನು ನೇಮಕಮಾಡಿದ ಪ್ರಾಧಿಕಾರಿಯ ಅನುಮತಿ ಇಲ್ಲದೆ, ಖಾಸಗಿ ಟ್ಯೂಷನ್ ನೀಡುವುದರಲ್ಲಿ ಅಥವಾ ಯಾವುದೇ ಇತರ ನಿಯೋಜನೆ ಅಥವಾ ಉದ್ಯೋಗದಲ್ಲಿ ತೊಡಗತಕ್ಕದ್ದಲ್ಲ.

## ಅಧ್ಯಾಯ – *IX*

## ಸಂಕೀರ್ಣ ಮತ್ತು ತಾತ್ಕಾಲಿಕ ಉಪಬಂಧಗಳು

**62. ಬಡ್ತಿ ಯೋಜನೆಗಳಿಗೆ ಅನುಸಾರವಾಗಿ ನೇಮಕಾತಿ.–** ಮೇಲೆ ಒಳಗೊಂಡಿರುವುದು ಏನೇ ಇದ್ದರೂ, ಸಂವಿಧಾನದ 16(4) ಮತ್ತು 16(4ಎ) ಅನುಚ್ಛೇದಗಳಡಿಯಲ್ಲಿ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗಾಗಿ ನೇಮಕಾತಿ ಮತ್ತು ಹುದ್ದೆಗಳ ಮೀಸಲಾತಿಗಾಗಿ ಕಾಲಕಾಲಕ್ಕೆ ಹೊರಡಿಸಿದ ಸರ್ಕಾರದ ನಿಯಮಗಳು ಮತ್ತು ಆದೇಶಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಯಲ್ಲಿ ಅಧ್ಯಾಪಕರ ಹುದ್ದೆಗೆ ನೇಮಕಾತಿಯನ್ನು, ವಿಶ್ವವಿದ್ಯಾಲಯ ಅನುದಾನಗಳ ಆಯೋಗ ಮತ್ತು ಸಂಬಂಧಪಟ್ಟ ಅಂತಹ ಇತರ ನಿಕಾಯಗಳ ಮೂಲಕ ಪ್ರಾಪ್ತವಾದ ಯೋಜನೆಗಳನ್ನು ಅಳವಡಿಸಿಕೊಂಡು ಶಾಸನಗಳ ಮೂಲಕ ನಿಯಮಿಸಲಾದಂತೆ ಬಡ್ತಿಗಳು ಅಥವಾ ಜೀವನಗತಿಯನ್ನು (career) ನಿಯಂತ್ರಿಸುವ ಯೋಜನೆಗಳಿಗನುಸಾರವಾಗಿ ಸಂಬಂಧಪಟ್ಟ ನೇಮಕಾತಿ ಮಂಡಳಿಯ ಶಿಫಾರಸ್ಸಿನ ಮೇರೆಗೆ ಪ್ರಬಂಧಕ ಮಂಡಳಿಯು ಮಾಡತಕ್ಕದ್ದು.

**63. ಪ್ರಾಯೋಜಿತ ಯೋಜನೆಗಳು.–** ವಿಶ್ವವಿದ್ಯಾಲಯವು ಸರ್ಕಾರದಿಂದ ನಿಧಿಯನ್ನು ಸ್ವೀಕರಿಸಿದಾಗಲೆಲ್ಲಾ, ವಿಶ್ವವಿದ್ಯಾಲಯ ಅನುದಾನಗಳ ಆಯೋಗ ಅಥವಾ ವಿಶ್ವವಿದ್ಯಾಲಯವು ನಿರ್ವಹಿಸಬೇಕಾದುದೆಂದು ಅಂಗೀಕರಿಸಿರುವ ಯೋಜನೆಯನ್ನು ಪ್ರಾಯೋಜಿಸುವ ಖಾಸಗಿ ಉದ್ಯಮಗಳು ಒಳಗೊಂಡಂತೆ, ಇತರ ಏಜೆನ್ಸಿಗಳು, ಈ ಅಧಿನಿಯಮದಲ್ಲಿ ಏನೇ ಇದ್ದರೂ,–

(ಎ) ವಿಶ್ವವಿದ್ಯಾಲಯವು, ಸ್ವೀಕರಿಸಲಾದ ಮೊತ್ತವನ್ನು, ವಿಶ್ವವಿದ್ಯಾಲಯದ ನಿಧಿಯಿಂದ ಪ್ರತ್ಯೇಕವಾಗಿ ಇಡತಕ್ಕದ್ದು ಮತ್ತು ಯೋಜನೆಯ ಉದ್ದೇಶಕ್ಕಾಗಿಯೇ ಉಪಯೋಗಿಸತಕ್ಕದ್ದು; ಮತ್ತು

(ಬಿ) ಯೋಜನೆಯನ್ನು ನಿರ್ವಹಿಸಲು ಅಗತ್ಯವಾದ ಸಿಬ್ಬಂದಿಯನ್ನು ಪ್ರಾಯೋಜಕ ಸಂಸ್ಥೆಯು ಗೊತ್ತುಪಡಿಸಿದ ನಿಬಂಧನೆಗಳು ಮತ್ತು ಷರತ್ತುಗಳಿಗನುಸಾರವಾಗಿ ಭರ್ತಿ ಮಾಡತಕ್ಕದ್ದು;

(ಸಿ) ಅಂಥ ಯೋಜನೆಯು, ಸರ್ಕಾರದಿಂದ ಯಾವುದೇ ಅನುರೂಪ ವಂತಿಗೆಯನ್ನು ಒಳಗೊಳ್ಳುವ ಅಥವಾ ಪ್ರಯೋಜಕ ಪ್ರಾಧಿಕಾರದಿಂದ ನೆರವು ನಿಂತುಹೋದ ತರುವಾಯ ಸರ್ಕಾರದ ಮೇಲೆ ಆವರ್ತಕ ಹೊಣೆಗಾರಿಕೆಯನ್ನು ವಿಧಿಸುವ ಸಂದರ್ಭದಲ್ಲಿ, ಅಂಥ ಸಿಬ್ಬಂದಿಯು, ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದ ಹೊರತಾಗಿ, ಪ್ರಾಯೋಜಕ ಪ್ರಾಧಿಕಾರದಿಂದ ನೆರವು ನಿಂತುಹೋದ ತರುವಾಯ, ಮುಂದುವರೆಯುವುದಕ್ಕೆ ಹಕ್ಕುಳ್ಳದ್ದಾಗಿರತಕ್ಕದ್ದಲ್ಲ.

**64. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮ, ಅದರಡಿಯಲ್ಲಿ ಮಾಡಲಾದ ಶಾಸನಗಳು, ವಿನಿಯಮಗಳು ಅಥವಾ ನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯ ಅಥವಾ ಅದರ ಪ್ರಾಧಿಕಾರಗಳ, ನಿಕಾಯಗಳ ಅಥವಾ ಅಧಿಕಾರಿಗಳ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆ ನಡೆಸಲು ಮತ್ತು ಯಾವುದೇ ನಷ್ಟಗಳನ್ನು ಕ್ಲೇಮು ಮಾಡಲು ಅವಕಾಶ ಇರತಕ್ಕದ್ದಲ್ಲ.

**65. ಕಾರ್ಯ ಮತ್ತು ವ್ಯವಹರಣೆಗಳು ರಚನೆ, ಇತ್ಯಾದಿಗಳಲ್ಲಿಯ ದೋಷದ ಆಧಾರದ ಮೇಲೆ ಮಾತ್ರವೇ ಅಸಿಂಧುವಾಗತಕ್ಕದ್ದಲ್ಲ:–** ವಿಶ್ವವಿದ್ಯಾಲಯದ ಪ್ರಬಂಧಕ ಮಂಡಳಿ ಅಥವಾ ಯಾವುದೇ ಇತರ ಪ್ರಾಧಿಕಾರ ಅಥವಾ ನಿಕಾಯವನ್ನು ವಿಧ್ಯುಕ್ತವಾಗಿ ರಚಿಸಿರದಿದ್ದರೆ ಅಥವಾ ಯಾವುದೇ ಕಾಲದಲ್ಲಿ ಅದರ ರಚನೆಯಲ್ಲಿ ಅಥವಾ ಪುನರ್‌ರಚನೆಯಲ್ಲಿ ಯಾವುದೇ ದೋಷವಿದ್ದರೆ ಮತ್ತು ಯಾವುದೇ ಅಂಥ ಪ್ರಾಧಿಕಾರದ ಸದಸ್ಯರ ಸ್ಥಾನವು ಖಾಲಿಯಿದ್ದರೆ, ಅಂಥ ಪ್ರಾಧಿಕಾರದ ಅಥವಾ ನಿಕಾಯದ ಯಾವುದೇ ಕಾರ್ಯ ಅಥವಾ ವ್ಯವಹರಣೆಯು, ಅಂಥ ಯಾವುದೇ ಕಾರಣ ಅಥವಾ ಕಾರಣಗಳ ಆಧಾರದ ಮೇಲೆ ಅಸಿಂಧುವಾಗತಕ್ಕದ್ದಲ್ಲ.

**66. ತೊಂದರೆಗಳ ನಿವಾರಣೆಗೆ ಅಧಿಕಾರ.–** (1) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಪ್ರಥಮ ರಚನೆಯ ಅಥವಾ ಪುನಾರಚನೆಯ ಸಂಬಂಧದಲ್ಲಿ ಅನುಸೂಚಿತ ದಿನಾಂಕದ ತರುವಾಯ ಅಥವಾ ಅನ್ಯಥಾ ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ಸರ್ಕಾರವು ಅಧಿಸೂಚನೆಯ ಮೂಲಕ ತೊಂದರೆಯ ನಿವಾರಣೆಗಾಗಿ ಅವಶ್ಯಕ ಹಾಗೂ ಸಮಂಜಸವೆಂದು ತನಗೆ ಕಂಡುಬರುವಂಥ ಹಾಗೂ ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಲ್ಲದ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮದ 3ನೇ ಪ್ರಕರಣದ ಅಡಿಯಲ್ಲಿ ವಿಶ್ವವಿದ್ಯಾಲಯವು ಸ್ಥಾಪನೆಯಾದ ದಿನಾಂಕದಿಂದ ಮೂರು ವರ್ಷಗಳು ಮುಕ್ತಾಯವಾದ ತರುವಾಯ ಅಂಥ ಯಾವುದೇ ಅಧಿಸೂಚನೆಯನ್ನು ಹೊರಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಥವಾ ಈ ಅಧಿನಿಯಮದ ಯಾವುದೇ ಉಪಬಂಧದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು, ಅದನ್ನು ಹೊರಡಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಸದರಿ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು ರಾಜ್ಯ ವಿಧಾನಮಂಡಲದ ಯಾವೊಂದು ಸದನವು ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಡು ಮಾಡಿದರೆ, ಅಥವಾ ಆ ಅಧಿಸೂಚನೆಯು ಪರಿಣಾಮಕ್ಕೆ ಬರತಕ್ಕದ್ದಲ್ಲವೆಂದು ನಿರ್ದೇಶಿಸಿದರೆ ಹಾಗೂ ಆ ಮಾರ್ಪಾಡು ಅಥವಾ ನಿರ್ದೇಶನವನ್ನು ಇನ್ನೊಂದು ಸದನವು ಒಪ್ಪಿದರೆ ತದನಂತರ ಅಂಥ ಅಧಿಸೂಚನೆಯು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ಧತಿಯು ಈ ಅಧಿಸೂಚನೆಯ ಅಡಿಯಲ್ಲಿ ಈ ಮೊದಲು ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧೆ ಉಂಟುಮಾಡತಕ್ಕದ್ದಲ್ಲ.

**67. ಅನುಸೂಚಿಯನ್ನು ತಿದ್ದುಪಡಿ ಮಾಡುವ ಅಧಿಕಾರ.–** ಪ್ರಬಂಧಕ ಮಂಡಳಿಯು, ಕಾಲಕಾಲಕ್ಕೆ ಶಾಸನದ ಮೂಲಕ ಈ ಅಧಿನಿಯಮದ ಅನುಸೂಚಿಯ ಯಾವುದೇ ಉಪಬಂಧಗಳನ್ನು ಸೇರಿಸಬಹುದು, ತಿದ್ದುಪಡಿ ಮಾಡಬಹುದು, ವ್ಯತ್ಯಾಸಗೊಳಿಸಬಹುದು ಅಥವಾ ಬಿಟ್ಟುಬಿಡಬಹುದು.

**68. ತಾತ್ಕಾಲಿಕ ಉಪಬಂಧಗಳು:–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಕುಲಪತಿಯವರು, ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ, ವಿಶ್ವವಿದ್ಯಾನಿಲಯದ ಎಲ್ಲಾ ಅಥವಾ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸಬಹುದು ಮತ್ತು ಆ ಉದ್ದೇಶಕ್ಕಾಗಿ ಈ ಅಧಿನಿಯಮದ ಮೂಲಕ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ಚಲಾಯಿಸಬೇಕಾದ ಅಥವಾ ನಿರ್ವಹಿಸಬೇಕಾದ ಯಾವುವೇ ಅಧಿಕಾರಗಳನ್ನು ಅಥವಾ ಕರ್ತವ್ಯಗಳನ್ನು ಈ ಅಧಿನಿಯಮದಲ್ಲಿ ಉಪಬಂಧಿಸಿದಂತೆ ಅಂಥ ಪ್ರಾಧಿಕಾರವು ಅಸ್ತಿತ್ವಕ್ಕೆ ಬರುವ ವರೆಗೆ ಚಲಾಯಿಸಬಹುದು ಅಥವಾ ನೆರವೇರಿಸಬಹುದು.

**69. ಶಾಸನಗಳು, ವಿನಿಯಮಗಳು, ನಿಯಮಗಳು ಇತ್ಯಾದಿಗಳ ಮುಂದುವರಿಕೆ.–** (1) ಈ ಅಧಿನಿಯಮದ ಸೂಕ್ತ ಉಪಬಂಧಗಳ ಅಡಿಯಲ್ಲಿ ಶಾಸನಗಳು, ವಿನಿಯಮಗಳು ಮತ್ತು ನಿಯಮಗಳನ್ನು ರಚಿಸುವವರೆಗೆ, ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ದ ಉಪಬಂಧಗಳ ಅಡಿಯಲ್ಲಿ ಮಾಡಿದ ಹಾಗೂ ಈ ಅಧಿನಿಯಮದ ಪ್ರಾರಂಭದ ನಿಕಟಪೂರ್ವದಲ್ಲಿ ಜಾರಿಯಲ್ಲಿರುವ ಶಾಸನಗಳು, ವಿನಿಯಮಗಳು ಮತ್ತು ನಿಯಮಗಳ ಉಪಬಂಧಗಳು, ಕುಲಪತಿಯವರು ಅದರಲ್ಲಿ ಮಾಡಬಹುದಾದ ಅಂಥ ಅಳವಡಿಕೆಗಳು ಅಥವಾ ಮಾರ್ಪಾಡುಗಳಿಗೆ ಒಳಪಟ್ಟು, ಈ ಅಧಿನಿಯಮದ ಸೂಕ್ತ ಉಪಬಂಧಗಳ ಅಡಿಯಲ್ಲಿ ಮಾಡಿದ ಶಾಸನಗಳು, ವಿನಿಯಮಗಳು ಮತ್ತು ನಿಯಮಗಳೆಂದು ಭಾವಿಸತಕ್ಕದ್ದು.

(2) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ, 2000ದ ಅಡಿಯಲ್ಲಿ ಸ್ಥಾಪಿತವಾದ ವಿಶ್ವವಿದ್ಯಾಲಯದ ಕುಲಪತಿಯ ಹುದ್ದೆಯನ್ನು ಧಾರಣ ಮಾಡಿದ ವ್ಯಕ್ತಿಯು, ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು, ಈ ಅಧಿನಿಯಮವನ್ನು ಅಂಗೀಕರಿಸಿರದಿದ್ದರೆ ಅವರು ಪದವನ್ನು ಧಾರಣ ಮಾಡಬಹುದಾಗಿದ್ದ ದಿನಾಂಕದವರೆಗೆ ಪದಧಾರಣ ಮಾಡುವುದು ಮುಂದುವರಿಯತಕ್ಕದ್ದು.

**70. ಈ ಅಧಿನಿಯಮವು ಇತರ ಅಧಿನಿಯಮಗಳ ಮೇಲೆ ಹೆಚ್ಚಿನ ಪ್ರಭಾರವುಳ್ಳದ್ದಾಗಿರುವುದು:–** ಈ ಅಧಿನಿಯಮವು ಮತ್ತು ಅದರ ಅಡಿಯಲ್ಲಿ ಮಾಡಿದ ಶಾಸನಗಳು ಅಥವಾ ನಿಯಮಗಳು ಅಥವಾ ವಿನಿಯಮಗಳು, ವಿಶ್ವವಿದ್ಯಾಲಯದ ಪ್ರದೇಶದಲ್ಲಿರುವ ಯಾವುದೇ ಕಾಲೇಜಿನ ಸಂಬಂಧದಲ್ಲಿ, ಭಾರತ ಸಂವಿಧಾನದ ಏಳನೇ ಅನುಸೂಚಿಯ IIನೇ ಪಟ್ಟಿಯಲ್ಲಿ ನಮೂದು ಮಾಡಿದ ವಿಷಯಗಳ ಸಂಬಂಧದಲ್ಲಿ ಯಾವುದೇ ಇತರ ಅಧಿನಿಯಮದಲ್ಲಿ ಇದಕ್ಕೆ ಅಸಂಗತವಾದುದೇನೇ ಒಳಗೊಂಡಿದ್ದರೂ ಪರಿಣಾಮವುಳ್ಳವುಗಳಾಗಿರತಕ್ಕದ್ದು.

**71. 2001ರ ಕರ್ನಾಟಕ ಅಧಿನಿಯಮ 29ರ ತಿದ್ದುಪಡಿ.–** ಕರ್ನಾಟಕ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ರಲ್ಲಿ (2001ರ ಕರ್ನಾಟಕ ಅಧಿನಿಯಮ 29), 3ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ, (ಸಿ) ಮತ್ತು (ಎಫ್) ಖಂಡಗಳನ್ನು ಬಿಟ್ಟುಬಿಡತಕ್ಕದ್ದು.

**72. 2001ರ ಕರ್ನಾಟಕ ಅಧಿನಿಯಮ 29 ಅನ್ವಯವಾಗದಿರುವುದು.–** (1) ಈ ಅಧಿನಿಯಮದಡಿಯಲ್ಲಿ ಸ್ಥಾಪಿತವಾದ ವಿಶ್ವವಿದ್ಯಾಲಯಗಳಿಗೆ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ದ ಉಪಬಂಧಗಳು ಅನ್ವಯವಾಗುವುದು ನಿಂತು ಹೋಗತಕ್ಕದ್ದು ಮತ್ತು ಈ ಅಧಿನಿಯಮದಡಿಯಲ್ಲಿ ನಿರ್ದಿಷ್ಟವಾಗಿ ಸೇರಿಸದಿರುವ ವಿಷಯಗಳು ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಶಾಸನಗಳ ಮೂಲಕ ನಿಯಂತ್ರಿಸಲ್ಪಡತಕ್ಕದ್ದು:

ಪರಂತು, ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1899ರ 6ನೇ ಪ್ರಕರಣದ ಉಪಬಂಧಗಳು, ಸದರಿ ಅಧಿನಿಯಮದ ನಿರಸನದ ಸಂಬಂಧದಲ್ಲಿ ಅನ್ವಯವಾಗತಕ್ಕದ್ದು ಮತ್ತು ಸದರಿ ಅಧಿನಿಯಮದ 8 ಮತ್ತು 24ನೇ ಪ್ರಕರಣದ ಅಡಿಯಲ್ಲಿ, ಸದರಿ ಕಾನೂನಿನ ಉಪಬಂಧಗಳು, ಸದರಿ ಅಧಿನಿಯಮವನ್ನು ಮತ್ತು ಉಪಬಂಧಗಳನ್ನು ಈ ಅಧಿನಿಯಮದ ಮೂಲಕ ನಿರಸನಗೊಳಿಸಲಾಗಿದ್ದರೆ ಮತ್ತು ಮರು ಅಧಿನಿಯಮಿತಿಗೊಳಿಸಲಾಗಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು.

(2) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದಲ್ಲಿ, ಸರ್ಕಾರವು ಸರ್ಕಾರಿ ರಾಜ್ಯ ಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ, ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ ಅವಶ್ಯವೆಂದು ತನಗೆ ಕಂಡು ಬರುವ ಯಾವುದೇ ಕ್ರಮ ಕೈಗೊಳ್ಳಬಹುದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಲಾದ ಯಾವುದೇ ಆದೇಶವನ್ನು, ಸದರಿ ಉಪಪ್ರಕರಣದಲ್ಲಿ ಹೇಳಿದಂತೆ ಉಲ್ಲೇಖಿಸಲಾದ ಯಾವುದೇ ತೊಂದರೆ ಇರುವುದಿಲ್ಲವೆಂಬ ಅಥವಾ ನಿವಾರಿಸುವ ಅಗತ್ಯವಿರುವುದಿಲ್ಲವೆಂಬ ಆಧಾರದ ಮೇಲೆ ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕದ್ದಲ್ಲ.

(4) ಈ ಪ್ರಕರಣದ ಅಡಿಯಲ್ಲಿ ಪ್ರಕಟಿಸಲಾದ ಪ್ರತಿಯೊಂದು ಆದೇಶವನ್ನು, ಅದರ ಪ್ರಕಟಣೆಯ ತರುವಾಯ, ರಾಜ್ಯ ವಿಧಾನಮಂಡಲದ ಉಭಯಸದನಗಳ ಮುಂದೆ ಮಂಡಿಸತಕ್ಕದ್ದು.

## ಅನುಸೂಚಿ

### (2(20) ಮತ್ತು 67ನೇ ಪ್ರಕರಣವನ್ನು ನೋಡಿ)

### ಭಾಗ–1

ಅನುಸೂಚಿಯ ಭಾಗ–1ರ ಉಪಬಂಧವು, ವಿಶ್ವವಿದ್ಯಾಲಯದ ಏಕೀಕೃತ ಹಾಗೂ ಸಂಯೋಜನಾ ಪದ್ಧತಿ ಅಧಿಕಾರಿಗಳ ನೇಮಕಾತಿ, ಅಧಿಕಾರ ಹಾಗೂ ಪ್ರಕಾರ್ಯಗಳಿಗೆ ಸಂಬಂಧಿಸಿರುತ್ತದೆ.

ಎ. ಏಕೀಕೃತ ಪದ್ಧತಿಯ ಅಡಿಯಲ್ಲಿಯ ಅಧಿಕಾರಿಗಳು.

**1. ಡೀನ್.–** (1) ಪ್ರತಿಯೊಂದು ವಿದ್ಯಾಲಯಕ್ಕೆ ಒಬ್ಬ ಡೀನರು ಇರತಕ್ಕದ್ದು, ಇವರು ವ್ಯಾಸಂಗ ವಿಭಾಗ ಪರಿಷತ್ತಿನ ಪದನಿಮಿತ್ತ ಚೇರ್‌ಮನ್ ಆಗಿರತಕ್ಕದ್ದು. ಹಾಗೂ ಸಂಬಂಧಪಟ್ಟ ವಿದ್ಯಾಲಯದ ವಿದ್ಯಾ ವಿಷಯಕ ವ್ಯವಹಾರಗಳಿಗೆ ಹೊಣೆಗಾರರಾಗಿರತಕ್ಕದ್ದು. ಇವರು ಈ ಅಧಿನಿಯಮದಡಿಯಲ್ಲಿನ ಶಾಸನಗಳ ಮೂಲಕ ನಿಯಮಿಸಬಹುದಾದಂತೆ, ವಿದ್ಯಾಲಯದ ಸೂಕ್ತ ಕಾರ್ಯ ನಿರ್ವಹಣೆಗಾಗಿ ಅವಶ್ಯಕವಾದ ಮತ್ತು ಆನುಷಂಗಿಕವಾದ ಅಂಥ ಎಲ್ಲಾ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

(2) ಈ ಉದ್ದೇಶಕ್ಕಾಗಿ ರಚಿಸಿದ ಶಾಸನಗಳ ಪ್ರಕಾರ ಮೂರು ವರ್ಷಗಳ ಅವಧಿಗಾಗಿ ಕುಲಪತಿಯವರು ಡೀನರನ್ನು ನೇಮಕ ಮಾಡುತ್ತಾರೆ.

**2. ನಿರ್ದೇಶಕರು, ಜ್ಞಾನ ಸಂಪನ್ಮೂಲಗಳು.–** (1) ಜ್ಞಾನ ಸಂಪನ್ಮೂಲಗಳ ನಿರ್ದೇಶಕರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಹಾಗೂ ಗ್ರಂಥಾಲಯಕ್ಕೆ ಸಂಬಂಧಿಸಿದ ವಿಷಯಗಳು ಒಳಗೊಂಡಂತೆ, ಎಲ್ಲಾ ಜ್ಞಾನ ಸಂಪನ್ಮೂಲಗಳಿಗೆ ಹೊಣೆಗಾರರಾಗಿರತಕ್ಕದ್ದು.

(2) ಈ ಅಧಿನಿಯಮದಲ್ಲಿ ನಮೂದಿಸಲಾದಂತೆ ನೇಮಕಾತಿ ಮಂಡಳಿಯ ಶಿಫಾರಸ್ಸಿನ ಮೇಲೆ ಪ್ರಬಂಧಕ ಮಂಡಳಿಯು ಇವರನ್ನು ನೇಮಕ ಮಾಡತಕ್ಕದ್ದು.

(3) ಇವರು ಶಾಸನಗಳ ಮೂಲಕ ನಿಯಮಿಸಬಹುದಾದ ಅಂಥ ಅರ್ಹತೆಗಳನ್ನು ಹೊಂದಿರತಕ್ಕದ್ದು ಹಾಗೂ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**3. ವಿದ್ಯಾರ್ಥಿಗಳ ಕಲ್ಯಾಣ ಹಾಗೂ ದೈಹಿಕ ಶಿಕ್ಷಣ ನಿರ್ದೇಶಕರು.–** ವಿಶ್ವವಿದ್ಯಾಲಯಗಳಲ್ಲಿನ ಅಥವಾ ಕಾಲೇಜುಗಳಲ್ಲಿನ ಪ್ರಾಧ್ಯಾಪಕರನ್ನು ಅಥವಾ ಸಹ–ಪ್ರಾಧ್ಯಾಪಕರನ್ನು, ಕುಲಪತಿಯವರ ಶಿಫಾರಸ್ಸಿನ ಮೇಲೆ ವಿದ್ಯಾರ್ಥಿಗಳ ಕಲ್ಯಾಣ ಹಾಗೂ ದೈಹಿಕ ಶಿಕ್ಷಣ ನಿರ್ದೇಶಕರಾಗಿ ಪ್ರಬಂಧಕ ಮಂಡಳಿಯು ನೇಮಕ ಮಾಡತಕ್ಕದ್ದು. ಇವರು ವಿಶ್ವವಿದ್ಯಾಲಯದ ಪೂರ್ಣ ಕಾಲಿಕ ಅಧಿಕಾರಿಯಾಗಿರತಕ್ಕದ್ದು ಹಾಗೂ ಕುಲಪತಿಯವರು, ಅವರಿಗೆ ಪ್ರದಾನ ಮಾಡಬಹುದಾದ ಅಥವಾ ವಿಧಿಸಬಹುದಾದ ಅಥವಾ ಶಾಸನಗಳ ಮೂಲಕ ನಿಯಮಿಸಬಹುದಾದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ನಿರ್ವಹಿಸತಕ್ಕದ್ದು. ಇವರ ಪದಾವಧಿ, ಉಪಲಬ್ಧಿಗಳು ಹಾಗೂ ಇತರೆ ಸೇವಾ ಷರತ್ತುಗಳು ಶಾಸನಗಳ ಮೂಲಕ ನಿಯಮಿಸಲಾದಂತೆ ಇರತಕ್ಕದ್ದು.

**4. ನಿರ್ದೇಶಕರು, ಅನ್ವೇಷಣೆ, ಸಂಶೋಧನೆ ಹಾಗೂ ಗುಣಮಟ್ಟ.–** ಗುಣಮಟ್ಟದ ಮೌಲ್ಯ ಮಾಪನದಲ್ಲಿ ಪರಿಶ್ರಮವಿರುವ ಶೈಕ್ಷಣಿಕ ಹಾಗೂ ಸಂಶೋಧನಾ ವಿಷಯದಲ್ಲಿ ಸಾಕಷ್ಟು ಪ್ರಸಿದ್ಧರಾಗಿರುವ ಪ್ರಾಧ್ಯಾಪಕರನ್ನು ಕುಲಪತಿಯವರ ಶಿಫಾರಸ್ಸುಗಳ ಮೇಲೆ ಅನ್ವೇಷಣೆ, ಸಂಶೋಧನೆ ಹಾಗೂ ಗುಣಮಟ್ಟದ ನಿರ್ದೇಶಕರಾಗಿ ಪ್ರಬಂಧಕ ಮಂಡಳಿಯು ನೇಮಕ ಮಾಡತಕ್ಕದ್ದು. ಇವರು, ಶಾಸನಗಳು ಮತ್ತು ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಅಥವಾ ಕುಲಪತಿಯವರು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದಂಥ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು. ಇದರ ಜೊತೆಯಲ್ಲಿ ಇವರು ಸಂಶೋಧನೆ ಮತ್ತು ಅನ್ವೇಷಣಾ ಪರಿಷತ್ತಿನ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

ಬಿ. ಸಂಯೋಜನಾ ಪದ್ಧತಿಯಡಿಯಲ್ಲಿಯ ಅಧಿಕಾರಿಗಳು.

**5. ನಿರ್ದೇಶಕರು, ಸಂಯೋಜನೆ ಮತ್ತು ಪರೀಕ್ಷಾ ಮಂಡಳಿ.–** ಸಂಯೋಜನೆ ಮತ್ತು ಪರೀಕ್ಷಾ ಮಂಡಳಿಯ ನಿರ್ದೇಶಕರನ್ನು ಕುಲಪತಿಯವರ ಶಿಫಾರಸ್ಸಿನ ಮೇಲೆ ಪ್ರಬಂಧಕ ಮಂಡಳಿಯು ನೇಮಕ ಮಾಡತಕ್ಕದ್ದು. ಇವರ ನೇಮಕಾತಿಗಾಗಿನ ಅರ್ಹತೆಗಳು, ಉಪಲಬ್ಧಿಗಳು ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಶಾಸನಗಳ ಮೂಲಕ ನಿಯಮಿಸಲಾದಂತೆ ಇರತಕ್ಕದ್ದು.

**6. ನಿರ್ದೇಶಕರು, ಮುಕ್ತ ಹಾಗೂ ದೂರ ಶಿಕ್ಷಣ ಮಂಡಳಿ.–** ಮುಕ್ತ ಹಾಗೂ ದೂರಶಿಕ್ಷಣ ಮಂಡಳಿಯ ನಿರ್ದೇಶಕರನ್ನು, ಕುಲಪತಿಯವರ ಶಿಫಾರಸ್ಸಿನ ಮೇಲೆ ಪ್ರಬಂಧಕ ಮಂಡಳಿಯು ನೇಮಕ ಮಾಡತಕ್ಕದ್ದು. ಇವರ ನೇಮಕಾತಿಗಾಗಿನ ಅರ್ಹತೆಗಳು, ಉಪಲಬ್ಧಿಗಳು ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಶಾಸನಗಳ ಮೂಲಕ ನಿಯಮಿಸಲಾದಂತೆ ಇರತಕ್ಕದ್ದು.

**7. ನಿರ್ದೇಶಕರು, ಅಧ್ಯಯನ ಮಂಡಳಿ.–** ಅಧ್ಯಯನ ಮಂಡಳಿಯ ನಿರ್ದೇಶಕರನ್ನು, ಕುಲಪತಿಯವರ ಶಿಫಾರಸ್ಸಿನ ಮೇಲೆ ಪ್ರಬಂಧಕ ಮಂಡಳಿಯು ನೇಮಕ ಮಾಡತಕ್ಕದ್ದು. ಇವರ ನೇಮಕಾತಿಗಾಗಿನ ಅರ್ಹತೆಗಳು, ಉಪಲಬ್ಧಿಗಳು ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಶಾಸನಗಳ ಮೂಲಕ ನಿಯಮಿಸಲಾದಂತೆ ಇರತಕ್ಕದ್ದು.

ಸಿ. ಇತರ ಅಧಿಕಾರಿಗಳು.

ಅಂಥ ಇತರ ಅಧಿಕಾರಿಗಳ ನೇಮಕಾತಿ, ಅಧಿಕಾರಗಳು, ಪ್ರಕಾರ್ಯಗಳು ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಶಾಸನಗಳ ಮೂಲಕ ನಿಯಮಿಸಲಾದಂತೆ ಇರತಕ್ಕದ್ದು.

ಭಾಗ – *II*

ಎ. ಏಕೀಕೃತ ಪದ್ಧತಿಯಡಿಯಲ್ಲಿಯ ಪ್ರಾಧಿಕಾರಗಳು ಹಾಗೂ ರಚನೆಗಳು.

**1. ಸಂಶೋಧನೆ ಹಾಗೂ ಅನ್ವೇಷಣಾ ಪರಿಷತ್ತು.–** (1) ಈ ಮುಂದಿನವುಗಳನ್ನು ಒಳಗೊಂಡಂತೆ ವಿಶ್ವವಿದ್ಯಾಲಯದ ಎಲ್ಲಾ ಸಂಶೋಧನಾ ಕಾರ್ಯಕ್ರಮಗಳನ್ನು ಯೋಜಿಸುವುದಕ್ಕಾಗಿ ಒಂದು ಸಂಶೋಧನಾ ಹಾಗೂ ಅನ್ವೇಷಣಾ ಪರಿಷತ್ತು ಇರತಕ್ಕದ್ದು.

(ಎ) ಜಂಟಿ ಸಂಶೋಧನೆಗಳನ್ನು ಕೈಗೊಳ್ಳಲು ಅಂತರ್ ವಿದ್ಯಾ ವಿಷಯಕ ಸಂವಾದ ಸಮನ್ವಯ;

(ಬಿ) ವಿಶ್ವವಿದ್ಯಾಲಯದಲ್ಲಿ ಅನ್ವೇಷಣೆಗೆ ಪ್ರೋತ್ಸಾಹಿಸುವುದು;

(ಸಿ) ಭೌದಿಕ ಸ್ವತ್ತು, ಸಮಾಲೋಚನೆ ಹಾಗೂ ಇತರೆ ವಿಸ್ತರಣಾ ಸೇವೆಗಳ ಸಂಬಂಧದಲ್ಲಿ ವಿಶ್ವವಿದ್ಯಾಲಯದ ಕಾರ್ಯನೀತಿಗಳನ್ನು ರೂಪಿಸುವುದಕ್ಕೆ/ತಿದ್ದುಪಡಿ ಮಾಡುವುದಕ್ಕೆ ಶಿಫಾರಸ್ಸು ಮಾಡುವುದು;

(ಡಿ) ಭೌದಿಕ ಸ್ವತ್ತು, ಪೇಟೆಂಟ್, ಆರ್ಜನೆ ಮುಂತಾದವುಗಳಿಗೆ ಸಂಬಂಧಿಸಿದ ವಿಷಯಗಳನ್ನು ಕುರಿತು ಅಧ್ಯಾಪಕರು ಹಾಗೂ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವುದು, ಮಾರ್ಗದರ್ಶನ ಮಾಡುವುದು ಹಾಗೂ ನೆರವು ನೀಡುವುದು;

(ಇ) ರಾಜ್ಯ, ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ, ಸಾಧ್ಯವಿರುವ ಎಲ್ಲಾ ವಿದ್ಯಾ ವಿಷಯಗಳಲ್ಲಿ ಸಂಶೋಧನೆಗಳ ವಿವಿಧ ಬಗೆಗಳಿಗೆ ಲಭ್ಯವಿರುವ, ಹಣ ಒದಗಿಸುವ ಎಲ್ಲಾ ಯೋಜನೆಗಳ ವಿವರಣಾತ್ಮಕ ಪೂರ್ಣ ಪಟ್ಟಿಯನ್ನು (catalog) ನಿರ್ವಹಿಸುವುದು;

(ಎಫ್) ವ್ಯವಹಾರ ಚಿಂತನಾ ಕೇಂದ್ರಗಳ, ಸಮಾಲೋಚನಾ ಕೇಂದ್ರಗಳ ಹಾಗೂ ಅದೇ ರೀತಿಯ ಸೇವಾ ಸೌಲಭ್ಯ ಸ್ಥಾಪನೆ.

(ಜಿ) ಸಂಶೋಧನೆಗೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ವಿದ್ಯಾವಿಷಯಕ ಪರಿಷತ್ತಿಗೆ ಸಲಹೆಯನ್ನು ನೀಡುವುದು.

(2) ಸಂಶೋಧನೆ ಹಾಗೂ ಅನ್ವೇಷಣಾ ಪರಿಷತ್ತು ಈ ಮುಂದಿನ ಸದಸ್ಯರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಯ ಸಹ ಕುಲಪತಿಯವರು ನಾಮ ನಿರ್ದೇಶನ ಮಾಡಿದ ಇಬ್ಬರು ಡೀನರು;

(ಬಿ) ನಿರ್ದೇಶಕರು, ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಯ ಅನ್ವೇಷಣೆ, ಸಂಶೋಧನೆ ಹಾಗೂ ಗುಣಮಟ್ಟ, ಇವರು ಸದರಿ ಪರಿಷತ್ತಿನ ಪದನಿಮಿತ್ತ ಸದಸ್ಯ–ಕಾರ್ಯದರ್ಶಿಯಾಗಿರುತ್ತಾರೆ;

(ಸಿ) ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು, ಜವಹರಲಾಲ್ ನೆಹರು ಉನ್ನತ ಅಧ್ಯಯನ ಕೇಂದ್ರ, ಬೆಂಗಳೂರು, ರಾಷ್ಟ್ರೀಯ ಉನ್ನತ ಅಧ್ಯಯನ ಸಂಸ್ಥೆ, ಬೆಂಗಳೂರು, ಮುಂತಾದಂಥ ಖ್ಯಾತ ರಾಷ್ಟ್ರೀಯ ಸಂಸ್ಥೆಗಳಿಂದ, ಕುಲಪತಿಯವರು ನಾಮ ನಿರ್ದೇಶಿಸಬೇಕಾದ ಒಬ್ಬ ಸದಸ್ಯ;

(ಡಿ) ಕೈಗಾರಿಕಾ ಕ್ಷೇತ್ರದಲ್ಲಿ ಅದ್ವಿತೀಯ ಸಾಧನೆಯನ್ನು ಸಾಧಿಸಿದ, ಪ್ರಬಂಧಕ ಮಂಡಳಿಯವರು ನಾಮ ನಿರ್ದೇಶಿಸಬೇಕಾದ ಒಬ್ಬ ಸದಸ್ಯ;

(ಇ) ಅತ್ಯಂತ ಹಿರಿಯ ಡೀನರು ಪರಿಷತ್ತಿನ ಅಧ್ಯಕ್ಷರಾಗಿರುತ್ತಾರೆ.

(3) ಇದರ ಸಭೆಯ ವಿಧಾನ ಹಾಗೂ ತೀರ್ಮಾನಗಳು ಶಾಸನಗಳ ಮೂಲಕ ನಿಯಮಿಸಲಾದಂತೆ ಇರತಕ್ಕದ್ದು.

2. **ನೇಮಕಾತಿಯ ಮಂಡಳಿ.**– ಹುದ್ದೆಗಳ ವಿವಿಧ ಪ್ರವರ್ಗಗಳಿಗೆ ಸಂಬಂಧಿಸಿದ ನೇಮಕಾತಿಯ ಮಂಡಳಿಯನ್ನು, ಈ ಅಧಿನಿಯಮದ ಅನುಸೂಚಿಯ ಭಾಗ–III ರಲ್ಲಿರುವಂತೆ ರಚಿಸತಕ್ಕದ್ದು.

3. **ವಿದ್ಯಾಲಯ.**– (1) ವಿಶ್ವವಿದ್ಯಾಲಯದ ಏಕೀಕೃತ ಪದ್ಧತಿಯ ಅಡಿಯಲ್ಲಿ ಈ ಮುಂದಿನ ವಿದ್ಯಾಲಯಗಳಿರತಕ್ಕದ್ದು. ವಿದ್ಯಾಲಯವು, ಸಂಬಂಧಪಟ್ಟ ವಿದ್ಯಾ ವಿಷಯ ವಿಭಾಗಗಳ ಹಲವಾರು ಕೇಂದ್ರಗಳ ಸಮುದಾಯ (ಕ್ಲಸ್ಟರ್) ಆಗಿರತಕ್ಕದ್ದು.

(ಎ) ಪರಿಸರ, ಭೂ–ವಿಜ್ಞಾನ ಹಾಗೂ ತಂತ್ರಜ್ಞಾನ ವಿದ್ಯಾಲಯ;

(ಬಿ) ಜೀವ ವಿಜ್ಞಾನ ಹಾಗೂ ತಂತ್ರಜ್ಞಾನ ವಿದ್ಯಾಲಯ;

(ಸಿ) ಗಣಿತ, ಗಣಕ (ಕಂಪ್ಯೂಟೇಷನ್)/ವಿಜ್ಞಾನ ಹಾಗೂ ತಂತ್ರಜ್ಞಾನ ವಿದ್ಯಾಲಯ;

(ಡಿ) ಭೌತ ಹಾಗೂ ರಾಸಾಯನಿಕ ವಿಜ್ಞಾನಗಳು ಹಾಗೂ ತಂತ್ರಜ್ಞಾನ ವಿದ್ಯಾಲಯ;

(ಇ) ಕಲೆಗಳು ಹಾಗೂ ಲಲಿತ ಕಲೆಗಳ ವಿದ್ಯಾಲಯ;

(ಎಫ್) ಭಾಷೆ ಹಾಗೂ ಸಾಹಿತ್ಯ ವಿದ್ಯಾಲಯ;

(ಜಿ) ಸಮಾಜ ವಿಜ್ಞಾನ ವಿದ್ಯಾಲಯ;

(ಹೆಚ್)ವ್ಯಾಪಾರ, ವಾಣಿಜ್ಯ ಹಾಗೂ ವ್ಯವಸ್ಥಾಪನಾ ವಿಜ್ಞಾನಗಳ ವಿದ್ಯಾಲಯ;

(ಐ) ಮಾಹಿತಿ ವಿಜ್ಞಾನ, ಪತ್ರಿಕೋದ್ಯಮ ಹಾಗೂ ವಿದ್ಯನ್ಮಾನ ಮಾದ್ಯಮಗಳ ವಿದ್ಯಾಲಯ;

(ಜೆ) ಶಿಕ್ಷಣ, ದೈಹಿಕ ಶಿಕ್ಷಣ ಹಾಗೂ ಯೋಗ ಶಿಕ್ಷಣ ವಿದ್ಯಾಲಯ;

(ಕೆ) ಕಾನೂನು ಹಾಗೂ ನ್ಯಾಯ ಶಾಸ್ತ್ರ ವಿದ್ಯಾಲಯ.

(2) ಹೆಚ್ಚುವರಿ ವಿದ್ಯಾಲಯಗಳನ್ನು ಕಾಲಕಾಲಕ್ಕೆ ಶಾಸನಗಳ ಮೂಲಕ ನಿಯಮಿಸಬಹುದು.

(3) ಪ್ರತಿಯೊಂದು ವಿದ್ಯಾಲಯವು ಶಾಸನಗಳ ಮೂಲಕ ನಿಯಮಿಸಬಹುದಾದಂಥ ಸಂಬಂಧಪಟ್ಟ ವಿದ್ಯಾ ವಿಷಯ ವಿಭಾಗಗಳ ವಿವಿಧ ಕೇಂದ್ರಗಳನ್ನು ಒಳಗೊಂಡಿರತಕ್ಕದ್ದು.

(4) ಪ್ರತಿಯೊಂದು ವಿದ್ಯಾಲಯಕ್ಕೆ ಶಾಸನಗಳ ಮೂಲಕ ನಿಯಮಿಸಬಹುದಾದಂತೆ, ನೇಮಕಗೊಂಡ ಡೀನರು ಮುಖ್ಯಸ್ಥರಾಗಿರತಕ್ಕದ್ದು.

4. **ವ್ಯಾಸಂಗ ವಿಭಾಗ ಪರಿಷತ್ತು.**– (1) ಪ್ರತಿಯೊಂದು ವಿದ್ಯಾಲಯವು ವ್ಯಾಸಂಗ ವಿಭಾಗ ಪರಿಷತ್ತನ್ನು ಹೊಂದಿರತಕ್ಕದ್ದು.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–**

ಅ) ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

ಆ) ದಿನಗೂಲಿ ವೇತನ ಪಡೆಯುವವರು :–

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು} \times \text{ತುಟ್ಟಿಭತ್ಯೆಯ ದರ} \times 30}{26} = \text{ತುಟ್ಟಿಭತ್ಯೆ}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.
7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.
8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.
9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.
10. ಅಪ್ರೆಂಟೀಸ್‌ಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

ವಲಯ–1 : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು ಹಾಗೂ ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳು.

ವಲಯ–2 : ವಲಯ–1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎನ್.ಆರ್. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – ***IV-A*** | ಬೆಂಗಳೂರು, ಗುರುವಾರ, ಮಾರ್ಚ್ ೧೦, ೨೦೧೧ (ಫಾಲ್ಗುಣ ೧೯, ಶಕ ವರ್ಷ ೧೯೩೨) | ನಂ. ೩೦೯ |
|---|---|---|


**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 6 ಎಲ್ಎಂಡಬ್ಲ್ಯೂ 2011 ಬೆಂಗಳೂರು, ದಿನಾಂಕ: 09–03–2011**

ಕರ್ನಾಟಕ ರಾಜ್ಯಾದ್ಯಂತ **"ಇಟ್ಟಿಗೆ"** ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಕನಿಷ್ಠ ವೇತನ ಕಾಯ್ದೆ 1948 ರ (ಕೇಂದ್ರಾಧಿನಿಯಮ ಸಂಖ್ಯೆ: XI) ಸೆಕ್ಷನ್ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ/ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅದನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸಸೌಧ, ಬೆಂಗಳೂರು ಇವರಿಗೆ ಅಥವಾ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948ರ ಸೆಕ್ಷನ್ 3(1)(ಬಿ) ಮತ್ತು 5(1)(ಬಿ)ರಡಿಯಲ್ಲಿ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ **"ಇಟ್ಟಿಗೆ"** ಉದ್ದಿಮೆಯ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ವೇತನವನ್ನು ಈ ಕೆಳಕಂಡಂತೆ ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು [ರೂಪಾಯಿಗಳಲ್ಲಿ] |
|---|---|---|
| **1** | **2** | **3** |
| | **ಅ. ಕಾರ್ಖಾನೆ ಕೆಲಸಗಾರರು** **ಪ್ರತಿ ದಿನಕ್ಕೆ** | |
| 1 | ಇಟ್ಟಿಗೆ ಕುಯ್ಯುವವರು | 154–57 |
| 2 | ಇಟ್ಟಿಗೆ ಸುಡುವವರು | 156–67 |
| 3 | ಮಣ್ಣು ಬೆರೆಸುವವರು | |
| 4 | ಸೌದೆ ಕತ್ತರಿಸುವವರು | 152–47 |
| 5 | ಗೂಡು ರಿಪೇರಿ ಮಾಡುವವರು | |
| | **ಆ. ಮೇಜಟ್ಟು ಇಟ್ಟಿಗೆ [ಟೇಬಲ್ ಮೌಲ್ಡೊ ಬ್ರಿಕ್ಸ್]** | |
| 1 | ಮಣ್ಣು ಸಾಗಿಸುವವರು, ತುಂಬುವವರು, ಇಳಿಸುವವರು [ಲಾರಿ ಲೋಡಿಗೆ] [ಒಂದು ಗುಂಪಿನಲ್ಲಿ ಸಾಧಾರಣ 4 ಮಂದಿ ಸಹಾಯಕರೊಡನೆ] | 172–42 |
| 2 | ಮಣ್ಣು ಹದ ಮಾಡುವವರು | 151–42 |
| 3 | ಇಟ್ಟಿಗೆ ಅಚ್ಚು ಹಾಕುವವರು [5 ಜನ ಸಹಾಯಕರೊಡನೆ] | 199–72 |
| 4 | ಗೂಡು ಕಟ್ಟುವವರು | 166–87 |
| 5 | ಕಲ್ಲಿದ್ದಲು ಅಥವಾ ಸೌದೆ ಹಾಕುವವರು | 360–37 |
| 6 | ಇಟ್ಟಿಗೆ ಲಾರಿಗೆ ತುಂಬುವವರು/ಇಳಿಸುವವರೆಉ [1000 ಇಟ್ಟಿಗೆಗೆ] | 144–07 |
| 7 | ಬೆಂದ ಇಟ್ಟಿಗೆಯನ್ನು ವಿಂಗಡಿಸುವವರು [ಪ್ರತಿ ದಿನಕ್ಕೆ] | 152–47 |
| | **ಇ. ನಾಟಿ ಇಟ್ಟಿಗೆ** | |
| 1 | ಇಟ್ಟಿಗೆ ಕುಯ್ಯುವವರು [10 ಜನ ಸಹಾಯಕರೊಡನೆ 1000 ಇಟ್ಟಿಗೆಗೆ] | 174–52 |

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು [ರೂಪಾಯಿಗಳಲ್ಲಿ] |
|---|---|---|
| **1** | **2** | **3** |
| 2 | ಇಟ್ಟಿಗೆ ಗೂಡು ಕಟ್ಟುವವರು [1000 ಇಟ್ಟಿಗೆ ಕಟ್ಟಲು] | 155–62 |
| 3 | ಸೌದೆ ಅಥವಾ ಕಲ್ಲಿದ್ದಲು ಹಾಕುವವರು [ಒಂದು ಗೂಡಿಗೆ] | 514–72 |
| 4 | ಅರಣಿ ಕಟ್ಟುವವರು ಒಂದು ಸಾಲಿಗೆ | 87–37 |
| 5 | ಬೆಂದ ಇಟ್ಟಿಗೆ ತುಂಬುವವರು/ಇಳಿಸುವವರು [1000 ಇಟ್ಟಿಗೆ] | 138–82 |
| 6 | ಬೆಂದ ಇಟ್ಟಿಗೆಯನ್ನು ವಿಂಗಡಿಸಲು [ಪ್ರತಿ ದಿನಕ್ಕೆ] | 152–47 |
| 7 | ಡ್ರೈವರ್ | **ಪ್ರತಿ ತಿಂಗಳಿಗೆ** |
| | | 4054–84 |
| 8 | ಕ್ಲೀನರ್ | 3746–13 |
| | **ಈ. ಕಛೇರಿ ಸಿಬ್ಬಂದಿ** | |
| 1 | ಕ್ಲರ್ಕ್/ಟೈಪಿಸ್ಟ್ | 4128–33 |
| 2 | ಕ್ಯಾಷಿಯರ್ | 4162–98 |
| 3 | ಸ್ಟೋರ್ ಕೀಪರ್ | 4004–43 |
| 4 | ಸ್ವೀಪರ್ | |
| 5 | ಕಾವಲುಗಾರ | 3870–00 |
| 6 | ಅಟೆಂಡರ್/ಆಫೀಸ್ ಜವಾನ/ಆಫೀಸ್ ಬಾಯ್ | |
| **ಊ. ಮೇಲ್ವಿಚಾರಣಾ ಸಿಬ್ಬಂದಿ** | | |
| 7 | ಫೋರ್‌ಮನ್ | 4469–58 |
| 8 | ಸೂಪರ್‌ವೈಸರ್ | 4385–58 |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 3944 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3944 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2010 ರಿಂದ ಡಿಸೆಂಬರ್ 2010)ರ ಸರಾಸರಿ ಆಧಾರದ ಮೇಲೆ 2011 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:**

ಅ) ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

ಆ) ದಿನಗೂಲಿ ವೇತನ ಪಡೆಯುವವರು :–

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30}}{26} = \text{ತುಟ್ಟಿಭತ್ಯೆ}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗದಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಅಪ್ರೆಂಟೀಸ್‌ಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎನ್.ಆರ್. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ



| ಭಾಗ – ***IV-A*** | ಬೆಂಗಳೂರು, ಗುರುವಾರ, ಮಾರ್ಚ್ ೧೦, ೨೦೧೧ (ಫಾಲ್ಗುಣ ೧೯, ಶಕ ವರ್ಷ ೧೯೩೨) | ನಂ. ೩೧೦ |
|---|---|---|



## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 7 ಎಲ್‌ಎಂಡಬ್ಲ್ಯೂ 2011, ಬೆಂಗಳೂರು, ದಿನಾಂಕ: 09–03–2011**

ಕರ್ನಾಟಕ ರಾಜ್ಯಾದ್ಯಂತ **"ಪೆಟ್ರೋಲ್ ಮತ್ತು ಡೀಸೆಲ್ ಆಯಿಲ್ ಪಂಪ್"** ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಕನಿಷ್ಠ ವೇತನ ಕಾಯ್ದೆ 1948 ರ (ಕೇಂದ್ರಾಧಿನಿಯಮ ಸಂಖ್ಯೆ: XI) ಸೆಕ್ಷನ್ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಸಲಹೆ/ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅದನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸಸೌಧ, ಬೆಂಗಳೂರು ಇವರಿಗೆ ಅಥವಾ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948ರ ಸೆಕ್ಷನ್ 3(1)(ಬಿ) ಮತ್ತು 5(1)(ಬಿ)ರಡಿಯಲ್ಲಿ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ **"ಪೆಟ್ರೋಲ್ ಮತ್ತು ಡೀಸೆಲ್ ಆಯಿಲ್ ಪಂಪ್"** ಉದ್ದಿಮೆಯ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ವೇತನವನ್ನು ಈ ಕೆಳಕಂಡಂತೆ ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು ಪ್ರತಿ ತಿಂಗಳಿಗೆ [ರೂಪಾಯಿಗಳಲ್ಲಿ] | |
|---|---|---|---|
| | | ವಲಯ–1 | ವಲಯ–2 |
| 1 | 2 | 3 | 4 |
| 1 | ಸೂಪರ್‌ವೈಸರ್ | 3996–59 | 3849–30 |
| 2 | ಬಿಲ್ ಕಲೆಕ್ಟರ್ | 3829–61 | 3734–90 |
| 3 | ಪಂಪ್ ಅಟೆಂಡರ್ | | |
| 4 | ಮ್ಯಾನೇಜರ್ | 4144–15 | 4072–54 |
| 5 | ಅಕೌಂಟೆಂಟ್ | 3911–49 | 3852–42 |
| 6 | ಕ್ಲರ್ಕ್ | 3846–59 | 3792–36 |
| 7 | ಕ್ಯಾಷಿಯರ್ | | |
| 8 | ಟೈಪಿಸ್ಟ್ | | |
| 9 | ಪೆಟ್ರೋಲ್ ಗನ್‌ಮೆನ್ | 3606–46 | 3561–36 |
| 10 | ಪಂಪ್ ಹೆಲ್ಪರ್ | | |
| 11 | ಹೆಲ್ಪರ್ | | |
| 12 | ಆಫೀಸ್ ಬಾಯ್ | | |
| 13 | ವಾಚ್‌ಮನ್ | | |
| 14 | ಜವಾನ | | |
| 15 | ಕಸಗುಡಿಸುವವರು | 3584–46 | 3531–33 |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 3944 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3944 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2010 ರಿಂದ ಡಿಸೆಂಬರ್ 2010)ರ ಸರಾಸರಿ ಆಧಾರದ ಮೇಲೆ 2011 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:**

ಅ) ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು X ತುಟ್ಟಿಭತ್ಯೆಯ ದರ X 30 ದಿನಗಳು= ತುಟ್ಟಿಭತ್ಯೆ

ಆ) ದಿನಗೂಲಿ ವೇತನ ಪಡೆಯುವವರು :–

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು X ತುಟ್ಟಿಭತ್ಯೆಯ ದರ X 30 = ತುಟ್ಟಿಭತ್ಯೆ}}{26}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗದಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಅಪ್ರೆಂಟೀಸ್‌ಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

ವಲಯ–1 : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು ಹಾಗೂ ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳು.

ವಲಯ–2 : ವಲಯ–1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎನ್.ಆರ್. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – ***III*** | ಬೆಂಗಳೂರು, ಮಂಗಳವಾರ, ಮಾರ್ಚ್ ೧೫, ೨೦೧೧ (ಫಾಲ್ಗುಣ ೨೪, ಶಕ ವರ್ಷ ೧೯೩೨) | ನಂ. ೩೧೧ |
|---|---|---|

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ಕಲಂ 28(4)ರ ಅಧಿಸೂಚನೆ**

**ಸಂಖ್ಯೆ: ಸಿಐ 119 ಎಸ್‌ಪಿಕ್ಯೂ 2011, ಬೆಂಗಳೂರು, ದಿನಾಂಕ: 14ನೇ ಮಾರ್ಚ್, 2011**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯಿದೆ (ಕರ್ನಾಟಕ ಕಾಯ್ದೆ 1966) (ಈ ಮುಂದೆ ಪ್ರಸ್ತುತ ಕಾಯಿದೆ ಎಂದು ಹೇಳಲಾಗಿದೆ) ಕಲಂ 28(1)ರನ್ವಯ ವಿಹಿತವಾಗಿರುವ ಅಧಿಕಾರದಡಿ ಅಧಿಸೂಚನೆ ನಂ. ಸಿಐ 678 ಎಸ್‌ಪಿಕ್ಯೂ 2010, ಬೆಂಗಳೂರು, ದಿನಾಂಕ: 28.12.2010 (ಈ ಮುಂದೆ ಅಧಿಸೂಚನೆ ಎಂದು ಹೇಳಲಾಗಿದೆ) ರಂದು ಹೊರಡಿಸಿದೆ. ದಿನಾಂಕ: 28.12.2010 ರಂದು ಪ್ರಕಟವಾದ ರಾಜ್ಯಪತ್ರದ ಪುಟ ಸಂಖ್ಯೆ. 1 ರಿಂದ 6ರ ತನಕ ವಿಶೇಷ ಪತ್ರಿಕೆ ಭಾಗ–3ರಲ್ಲಿ ಕರ್ನಾಟಕ ಸರ್ಕಾರವು ಪ್ರಸ್ತುತ ಅಧಿಸೂಚನೆಯಲ್ಲಿ Hospital ಸ್ಥಾಪನೆಗಾಗಿ ಅಭಿವೃದ್ಧಿ ಪಡಿಸುವ ಉದ್ದೇಶಕ್ಕಾಗಿ ಪ್ರಸ್ತುತ ಅಧಿಸೂಚನೆಯಲ್ಲಿ ಕಾಣಿಸಿರುವ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ತನ್ನ ಉದ್ದೇಶವನ್ನು ಪ್ರಕಟಿಸಿತ್ತು.

ಅದರಂತೆ ಪ್ರಸ್ತುತ ಕಾಯಿದೆಯನ್ವಯ ಕಲಂ 28ರ ಉಪ ಕಲಂ (3)ರನ್ವಯ ಆಜ್ಞೆಯನ್ನು ಹೊರಡಿಸಲಾಗಿದೆ ಮತ್ತು ಈ ಕೆಳಗೆ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳು ಪ್ರಸ್ತುತ ಅಧಿಸೂಚನೆಯಲ್ಲಿಯೂ ಕಾಣಿಸಲ್ಪಟ್ಟಿದೆ ಹಾಗೂ ಪ್ರಸ್ತುತ ಅಧಿಸೂಚನೆಯಲ್ಲಿ M/s Sahyadri Health Care & Diagnostics (p) Ltd., Hospital ಉದ್ದೇಶಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಬೇಕೆಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿದೆ.

ಆದುದರಿಂದ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 (ಕರ್ನಾಟಕ ಕಾಯಿದೆ 18:1966)ರ ಕಲಂ 28ರ ಉಪ ಕಲಂ (4)ರನ್ವಯ ವಿಹಿತವಾಗಿರವ ಅಧಿಕಾರದ ಮೇರೆಗೆ ಅಧಿಸೂಚನೆಯಲ್ಲಿ ಕಾಣಿಸಿರುವ ಉದ್ದೇಶಕ್ಕಾಗಿ ಈ ಕೆಳಗೆ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಈ ಮೂಲಕ ಕರ್ನಾಟಕ ಸರ್ಕಾರವು ಘೋಷಿಸಿದೆ.

**ಅನುಸೂಚಿ**

**ಗ್ರಾಮ: ಹರಕೆರೆ** **ಹೋಬಳಿ: ಕಸಬಾ (*I*)** **ತಾಲೂಕು: ಶಿವಮೊಗ್ಗ** **ಜಿಲ್ಲೆ: ಶಿವಮೊಗ್ಗ**

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಅನುಭವದಾರರ ಹೆಸರು | ತರಹೆ | ಸರ್ವೆ ನಂಬ್ರ | ಗಡಿಗಳು | | | | ಸ್ವಾಧೀನ ಪಡಿಸಿಕೊಳ್ಳುತ್ತಿರುವ ವಿಸ್ತೀರ್ಣ | | | ಆಕಾರ ರೂ.ಪೈ |
|---|---|---|---|---|---|---|---|---|---|---|---|---|
| | | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | ಐನ್ ಎ.ಗು. | ಖರಾಬು ಎ.ಗು. | ಬಾಕಿ ಎ.ಗು. | |
| **1** | **2** | **3** | **4** | **5** | **6** | **7** | **8** | **9** | **10ಎ** | **10ಬಿ** | **10ಸಿ** | **11** |
| 1 | ಸಂಗಮೇಶ ಪರಪ್ಪ ಗದಗ ಬಿನ್ ಪರಪ್ಪ ಶಿವಪ್ಪ ಗದಗ | ಕಲಂ 2 ರಂತೆ | ಸ.ನಿ.ತ | 144/1 | ಸ.ನಂ. 145 | ಸ.ನಂ. 143 | ಸ.ನಂ. 148 | ರಸ್ತೆ | 1–02 | – | 1–02 | 1.95 |
| 2 | ಸಂಗಮೇಶ ಪರಪ್ಪ ಗದಗ ಬಿನ್ ಪರಪ್ಪ ಶಿವಪ್ಪ ಗದಗ | ಕಲಂ 2 ರಂತೆ | ಸ.ನಿ.ತ | 144/2 | ಸ.ನಂ. 145 | ಸ.ನಂ. 143 | ಸ.ನಂ. 148 | ರಸ್ತೆ | 1–03 | – | 1–03 | 2.00 |
| 3 | ಸಂಗಮೇಶ ಪರಪ್ಪ ಗದಗ ಬಿನ್ ಪರಪ್ಪ ಶಿವಪ್ಪ ಗದಗ | ಕಲಂ 2 ರಂತೆ | ಸ.ನಿ.ತ | 144/3 | ಸ.ನಂ. 145 | ಸ.ನಂ. 143 | ಸ.ನಂ. 148 | ರಸ್ತೆ | 1–06 | – | 1–06 | 2.13 |

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಅನುಭವದಾರರ ಹೆಸರು | ತರಹೆ | ಸರ್ವೆ ನಂಬ್ರ | ಗಡಿಗಳು | | | | ಸ್ವಾಧೀನ ಪಡಿಸಿಕೊಳ್ಳುತ್ತಿರುವ ವಿಸ್ತೀರ್ಣ | | | ಆಕಾರ ರೂ.ಪೈ |
|---|---|---|---|---|---|---|---|---|---|---|---|---|
| | | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | ಐನ್ ಎ.ಗು. | ಖರಾಬು ಎ.ಗು. | ಬಾಕಿ ಎ.ಗು. | |
| | | | | | **6** | **7** | **8** | **9** | **10ಎ** | **10ಬಿ** | **10ಸಿ** | **11** |
| 4 | ಸಂಗಮೇಶ ಪರಪ್ಪ ಗದಗ ಬಿನ್ ಪರಪ್ಪ ಶಿವಪ್ಪ ಗದಗ | ಕಲಂ 2 ರಂತೆ | ಸ.ನಿ.ತ | 144/4 | ಸ.ನಂ. 145 | ಸ.ನಂ. 143 | ಸ.ನಂ. 148 | ರಸ್ತೆ | 0–30 | – | 0–30 | 1.39 |
| 5 | ಸಂಗಮೇಶ ಪರಪ್ಪ ಗದಗ ಬಿನ್ ಪರಪ್ಪ ಶಿವಪ್ಪ ಗದಗ | ಕಲಂ 2 ರಂತೆ | ಸ.ನಿ.ತ | 145/1 | ಸ.ನಂ. 146 | ಸ.ನಂ. 144 | ಸ.ನಂ. 147 | ರಸ್ತೆ | 0–23 | – | 0–23 | 1.08 |
| 6 | ಸಂಗಮೇಶ ಪರಪ್ಪ ಗದಗ ಬಿನ್ ಪರಪ್ಪ ಶಿವಪ್ಪ ಗದಗ | ಕಲಂ 2 ರಂತೆ | ಸ.ನಿ.ತ | 145/2 | ಸ.ನಂ. 146 | ಸ.ನಂ. 144 | ಸ.ನಂ. 147 | ರಸ್ತೆ | 0–22 | – | 0–22 | 1.03 |
| 7 | ಸಂಗಮೇಶ ಪರಪ್ಪ ಗದಗ ಬಿನ್ ಪರಪ್ಪ ಶಿವಪ್ಪ ಗದಗ | ಕಲಂ 2 ರಂತೆ | ಸ.ನಿ.ತ | 147 | ಸ.ನಂ. 230 | ಸ.ನಂ. 148 | ಸ.ನಂ. 147 ಪಿ | ಸ.ನಂ. 145, 146 | 0–12 | 0–02 | 0–10 | 0.30 |
| 8 | ಸಂಗಮೇಶ ಪರಪ್ಪ ಗದಗ ಬಿನ್ ಪರಪ್ಪ ಶಿವಪ್ಪ ಗದಗ | ಕಲಂ 2 ರಂತೆ | ಸ.ನಿ.ತ | 148 | ಸ.ನಂ. 147 | ಸ.ನಂ. 148 ಪಿ | ಸ.ನಂ. 148 ಪಿ | ಕಾಲುವೆ | 0–18 | – | 0–18 | 0.57 |
| | | | | | | | | **ಒಟ್ಟು:** | **5–36** | **0–02** | **5–34** | |

| ಘೋಷ್ವಾರೆ | | | |
|---|---|---|---|
| ಗ್ರಾಮದ ಹೆಸರು | ಪ್ರಸ್ತಾವಿತ ಜಮೀನಿನ ವಿಸ್ತೀರ್ಣ | | |
| | ಐನ್ | ಖರಾಬು | ಜತಾ |
| ಹರಕೆರೆ | **5–36** | **0–02** | **5–34** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಹೆಚ್.ಶೇಷಗಿರಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ